ಸುವರ್ಣ ಭಾರತಿ ಗ್ರಂಥ ೮.

# ಬಾಸಿಂಗಬಲ.

( ಕಾದಂಬರಿ ).



ಶ್ರೀರಾಮ ಪಾಟೀಲ.

ಸುವರ್ಣ ಭಾರತಿ ಗ್ರಂಥಮಾಲೆ, ಬೆಳಗಾವಿ.

೧೯೫೧ ]  [ ಬೆಲೆ ೧-೪-೦

ಮುದ್ರಕರು,
ಬಿ. ಡಿ. ಚೌಗುಲೆ,
ಶ್ರೀಮಹಾವೀರ ಮುದ್ರಣಾಲಯ,
ಬೆಳಗಾವಿ,



---

ಸಾಹಿತ್ಯದಲ್ಲಿ ಸಲಹೆಗಾರರು,

ಶ್ರೀಕೃಷ್ಣ ಪಾಟೀಲ
ಶ್ರೀರಾಮ ಪಾಟೀಲ, ಬಿ. ಎ. ಆನರ್ಸ ಬಿ. ಟಿ.
ಶ್ರೀ. ಪ್ರಹ್ಲಾದ ಕುಮಾರ ಭಾಗೋಜಿ, ಎಮ್. ಎ.
ಸೌ. ಶಮಾದೇವಿ ಪಾಟೀಲ.

---

ಪ್ರಕಾಶಕರು,
ವ. ಭೀ. ಪಾಟೀಲ,
ಸುವರ್ಣ ಭಾರತಿ ಗ್ರಂಥಮಾಲೆ,
ಬೆಳಗಾವಿ,

# ಎರಡು ಮಾತು.



" ಬಾಸಿಂಗ ಬಲವು " ನನ್ನ ರಕ್ತಧ್ವನಿ ಕಾದಂಬರಿಯ ಮುಂದಿನ ಭಾಗವು. ಇದರಲ್ಲಿ ಪಟ್ಟಣದ ವಾಸಕ್ಕೆ ಹೇಸಿಕೊಂಡು ಬಾಬೂನು ಹಳ್ಳಿಗೆ ಬಂದು ಒಕ್ಕಲತನದಲ್ಲಿ ಮನಸು ಹಾಕಿ ಹೊಲದಲ್ಲಿ ಬೆವರು ಸುರಿಸುವನು. ತನ್ನನ್ನೂ, ತನ್ನ ಪಾಲಿನ ಆಸ್ತಿಯನ್ನೂ ರಕ್ಷಿಸಲು ಒಬ್ಬ ವಿಶ್ವಾಸಿಕ ಸಂಗಾತಿಯು ಬೇಕೆನಿಸುವದು. ಆಕಸ್ಮಿಕವಾಗಿ ಯಾಯಾ ದೊರಕುವಳು. ಆ ಹಳ್ಳಿ ಕಾತಿಯು ಅವನ ಬಯಕೆಯನ್ನು ಚಾಚೂ ತಪ್ಪದೆ ನೆರವೇರಿಸುವಳು. ಈ ಸಹಾಯರಿಣವು ಪ್ರೇಮದವರೆಗೆ ಬೆಳೆಯುವದು ಆದರೆ ವಿಧವೆಯಳಾದ ಯಾಯಾನನ್ನು ಮದುವೆಯಾಗುವದು ಬಾಬೂನಿಗೆ ಸಂಕಟಕ್ಕಿಡುವದು. ಆದರೆ ತಾಯಿ ಗೋದಾವರಿ ಆ ಸಮಸ್ಯೆಯನ್ನು ಪರಿಹರಿಸುವಳು.

ಈ ಸಂಗತಿಯೂ ನಾನು ತೀರ ಚಿಕ್ಕವನಿರುವಾಗ ಅರಿತುದೇ. ಅದನ್ನಿಲ್ಲಿ ಕಾದಂಬರಿಯ ರೂಪದಿಂದ ಕನ್ನಡಿಗರ ಮುಂದೆ ಇಟ್ಟಿರುವೆ. ಆದರೆ ಇದರಲ್ಲಿ ಬರುವ ವ್ಯಕ್ತಿಗಳು ಇಂಥಿಂಥವರನ್ನು ಉದ್ದೇಶಿಸಿ ಎಂದು ಯಾರೂ ತಿಳಿಯಲಾಗದು. ವಸ್ತು ಕೇಳಿಕೆಯದಿದ್ದರೂ ಪಾತ್ರಗಳು ಕಲ್ಪನೆಯವು. ಕಾದಂಬರಿಯನ್ನು ಮೆಚ್ಚುವದು, ಬಿಡುವದು ಸಹೃದಯ ವಾಚಕರನ್ನು ಕೂಡಿದೆ.

ಇದರ ಮುಂದೂ ಬರೆಯಲು ಒಂದಿಷ್ಟು ಸಂಗತಿಯು ಉಳಿದಿದೆ. ಅದನ್ನು ಕನ್ನಡ ತಾಯಿಯೇ ಬರೆಯಿಸಬೇಕು.

ಹಾವೇರಿ.
ತಾ॥ ೧-೧೧-೫೧



ಶ್ರೀರಾಮ ಪಾಟೀಲ.



# ಪ್ರಕಾಶಕರ ವಿಜ್ಞಾಪನೆ.



ಇದು ನಮ್ಮ ಮಾಲೆಯ ಎರಡನೆಯ ವರುಷದ ಕೊನೆಯ ಪುಸ್ತಕವು. ಈ ವರುಷದಲ್ಲಿ ನಾವು ಕೊಡಮಾಡಿದಷ್ಟು ಪುಟಗಳಲ್ಲಿ ಪುಸ್ತಕಗಳನ್ನು ಒದಗಿಸಲಾಗಲಿಲ್ಲ. ಮುದ್ರಣಾಲಯದ ಅನಾನುಕೂಲತೆಯೂ, ಕಾಗದದ ಧಾರಣೆಯು ಮಿತಿಮೀರಿ ಏರಿದುದೂ ಕಾರಣವೆಂದು ಹೇಳಬಯಸುವೆವು. ಆದರೂ ಮುಂದಿನ ವರುಷ ಈ ವರುಷದ ಕೊರತೆಯನ್ನು ಪೂರಯಿಸುವೆವೆಂದು ದೃಢವಾಗಿ ಹೇಳಬಯಸುವೆವು.

ಮೂರನೆಯ ವರುಷದ ಮೊದಲನೆಯ ಕಾದಂಬರಿಯು ಶ್ರೀಕೃಷ್ಣ ಪಾಟೀಲರ "ಜಯಂತ." ಕಾದಂಬರಿಯು ಉದ್ದಕ್ಕೂ ಮಾನವೀ ಹೃದಯದ ವಿಷ-ರಸನಿಮಿಷಗಳ ಘಟನೆಗಳು ಹಾಸುಹೊಕ್ಕಾಗಿ ತುಂಬಿವೆ. ಓದಿದರೆ ಎಲ್ಲರ ಮನೆಯ, ಎಲ್ಲರ ಹೃದಯದ ಕಾದಂಬರಿ ಎಂದು ಅರಿಯಬಹುದು. ಕನ್ನಡ ಕಾದಂಬರಿಯ ಕ್ಷೇತ್ರಕ್ಕೆ ಅವರ "ಸಂಜೀವಿನಿ"ಯ ತರುವಾಯ ಇನ್ನೊಂದು ಬಗೆಯ ಹೊಸತನವನ್ನು ತಂದುಕೊಡುವಂತಹದು. ಅದಕ್ಕೆ ಈ ವರುಷದ ಚಂದಾದಾರ್ರರು ಮುಂದಿನ ವರುಷಕ್ಕೂ ಉಳಿದು ಮಾಲೆಯ-ಪ್ರಗತಿಗೆ ನೆರವಾಗಬೇಕು "ಜಯಂತ" ೧೯೫೨, ಜನವರಿ ೨೬ ರ ಸುಮಾರಿಗೆ ಹೊರಬೀಳುವದು. ಆ ಮೊದಲು ಮಾಲೆಯ ವಾರ್ಷಿಕ ವರ್ಗಣಿ ೬ ರೂ. ಕಳಿಸಿ ಹೆಸರನ್ನು ಉಳಿಸಿಕೊಳ್ಳಬೇಕು. ಇಲ್ಲವೆ ಪತ್ರ ಬರೆದಾದರು ತಿಳಿಸಬಹುದು. ಅಥವಾ ಪುಸ್ತಕ ಪ್ರಕಟವಾದ ಮೇಲೆ ತಮಗೆ ವ್ಹಿ. ಪಿ. ಮಾಡಿದರೆ ಸ್ವೀಕರಿಸಬೇಕು. ಕಾಗದದ ಬೆಲೆಯು ಮಿತಿಮೀರಿ ಏರಿದುದರಿಂದ ಇಂತಿಷ್ಟೇ ಪ್ರತಿಗಳನ್ನು ಮುದ್ರಿಸಬೇಕೆಂದು ನಿಶ್ಚಯಿಸಿರುವೆವು. ಯಾವ ಬಗೆಯಿಂದಾದರೂ ಸರಿ ಚಂದಾದಾರರ ಸಹಾಯವನ್ನು ನಿರೀಕ್ಷಿಸುವೆವು. ನಿಮ್ಮ ನೆರವನ್ನು ನಂಬಿದ,

ತಮ್ಮ,

**ಪ್ರಕಾಶಕರು.**

# ಗೆರೆಯಲ್ಲಿ ಲೇಖಕರ ಗುರುತು.



ಶ್ರೀರಾಮ ಪಾಟೀಲರ ಪೂರ್ಣ ಹೆಸರು ರಾಮಚಂದ್ರ ಭೀಮರಾವ ಪಾಟೀಲ ಎಂದು. ಇವರು ಗೋಕಾಕ ತಾಲೂಕಿನ ಬೆಟಗೇರಿಯ ಮೂಲ ನಿವಾಸಿಗಳು, ತಮ್ಮ ಮಾಧ್ಯಮಿಕ ಮತ್ತು ಕಾಲೇಜ ಶಿಕ್ಷಣವನ್ನು ಧಾರವಾಡ ಮತ್ತು ಬೆಳಗಾವಿಯಲ್ಲಿ ಮುಗಿಸಿದರು. ೧೯೪೦ ರಲ್ಲಿ ಆನರ್ಸಕ್ಕೆ ಕನ್ನಡ ತೆಗೆದುಕೊಂಡು ಬೆಳಗಾವಿಯ ಲಿಂಗರಾಜ ಕಾಲೇಜಿನಿಂದ ಪರೀಕ್ಷೆ ಕಟ್ಟಿ ತಾವು ಒಬ್ಬರೇ ಒಬ್ಬರಾಗಿ ತೇರ್ಗಡೆಹೊಂದಿ ಯಶವನ್ನು ಸಂಪಾದಿಸಿರುವರು. ಈಗ ಇವರು ಶಿಕ್ಷಣ ಖಾತೆಯಲ್ಲಿ ಒಂದು ಉಚ್ಚ ಅಧಿಕಾರಿಗಳಾಗಿ ಧಾರವಾಡ ಜಿಲ್ಹೆಯಲ್ಲಿ ದುಡಿಯುತ್ತಿರುವರು. ಕನ್ನಡ ಪತ್ರಿಕೆಗಳಲ್ಲಿ ಆಗಾಗ್ಗೆ ಕತೆ, ಕವಿತೆ, ವಿಮರ್ಶೆ, ನಿಬಂಧ ಅಲ್ಲದೆ ಶಿಕ್ಷಣ ವಿಷಯಕ್ಕೆ ಸಂಬಂಧಿಸಿದ ತುಲನಾತ್ಮಕ ಲೇಖಗಳನ್ನೂ ಬರೆಯುತ್ತಿರುವರು. ಗ್ರಂಥಸ್ಥವಾಗಿ ಸಂ. ಭಾ. ಗ್ರ. ಮಾಲೆಯವತಿಯಿಂದ "ರಕ್ತಧ್ವನಿ"ಯೆಂಬ ಕಾದಂಬರಿಯನ್ನು ಈಗಾಗಲೆ ಕನ್ನಡ ಸಾರಸ್ವತಕ್ಕೆ ಸಲ್ಲಿಸಿರುವರು. ಬಾಸಿಂಗ ಬಲವು ಆ ಕಾದಂಬರಿಯ ಉತ್ತರಭಾಗ. ಮತ್ತು ಅವರು ನಾಟಕವನ್ನೂ ಬರೆಯಬಲ್ಲರು. ಉತ್ತಮ ನಟರೂ ಆಹುದು. ಇದೇ ವರುಷ ಇವರು ಬರೆದ "ರಾಧೆಯ ಕರ್ಣ" ಎಂಬ ಪೌರಾಣಿಕ ನಾಟಕವು ವಿಜಾಪೂರದ ರಂಗಭೂಮಿಯಲ್ಲಿ ಯಶಸ್ವಿಯಾಗಿ ಅಭಿನಯಿಸಲಾಗಿದೆ. ಅಲ್ಲದೆ ಭರತ ವಿದ್ಯೆಯಲ್ಲಿಯೂ ಗತಿಯುಂಟು. ನೃತ್ಯದ ಕೆಲ ಪ್ರಯೋಗಗಳನ್ನು ಧಾರವಾಡ, ವಿಜಾಪೂರ, ಬಾಗಲಕೋಟೆಗಳಲ್ಲಿ ಪ್ರದರ್ಶಿಸಿರುವರು. ಧಾರವಾಡ ರೇಡಿಯೋ ಕೇಂದ್ರದಲ್ಲಿಯೂ ಕಾರ್ಯಕ್ರಮಗಳು ತೋರಿಸಲಾಗಿದೆ. ಸಾಹಿತ್ಯದ ಹಸಿವೆಯ ಜೊತೆಗೆ ನೃತ್ಯದ ಹಸಿವೂ ಉತ್ಕಟವಾಗಿದೆ. ಕಥಕ್ಕಳಿ, ಮಣಿಪುರ ನೃತ್ಯಗಳನ್ನು ಕಲಿಯಬೇಕೆಂದು ನಿತ್ಯ ಹಂಬಲಿಸುವರು. ಇವರ ಈ ಬಹುಮುಖದ ಕನ್ನಡ ತಾಯಿಯ ಸೇವೆಗೆ ವಿಧಿಯು ಎಲ್ಲವನ್ನೂ ಒದಗಿಸಿಕೊಡಬೇಕು. ಕನ್ನಡಮ್ಮನ ಕೀರ್ತಿಯು ಹೆಚ್ಚು ಹೆಚ್ಚಾಗಬೇಕು.



# ಬಾಸಿಂಗಬಲ

## ೧. ಪುನರ್ನಿವೇಶನ. * * *

ಮನೆಯಿಂದ ಹೊರಬಿದ್ದ ಬಾಬೂ ಗೋಸಬಾಳದ ಹೊರವಳಯುವನ್ನು ಮುಟ್ಟಿದಾಗ ಸಂಜೆಯಾಗಿತ್ತು. ಸುಳಿಗಾಳಿಯು ಸೆಕೆಯನ್ನು ಹೊತ್ತುಕೊಂಡು ಮೈಸುತ್ತಿ ಇದ್ದ ಬೆವರನ್ನು ಕುಡಿದು ದೂರದ ಕಂಟಿಗಳಲ್ಲಿ ಕೇಕೆ ಹಾಕುತ್ತಿತು. ಬೆವತ ಮೈಗೆ ಅದೇ ತೃಪ್ತಿ. ಬಳಲಿದ ಕಾಲುಗಳಿಗೆ ಅದೇ ಆಧಾರ. ಕಣ್ಣಿಗೆ ಉಗ್ಗುವ ಸೆಕೆಯನ್ನೂ ಅದು ತಿರುವಿಕೊಂಡು ಗಡಿ ದಾಟಿಸುತ್ತಲಿದೆ. ದನಗಾಯಿಗಳೂ, ಕುರುಬರೂ ತಮ್ಮ ತಮ್ಮ ವಿತ್ತಜೀವಿತಗಳನ್ನು ಗುಂಪುಗಟ್ಟಿಕೊಂಡು ಊರ ತೀರ ಸನಿಯಕ್ಕೆ ಬಂದಿದ್ದಾರೆ. ಗೊಬ್ಬರ ಹೇರಿ ಬಂದ ಚಕ್ಕಡಿಗಳು, ಮಡಿಕೆಗಳನ್ನು ಹೊತ್ತ ಎತ್ತು ಜೋಡುಗಳು, ಬುತ್ತಿ ಒಯ್ದ ಒಕ್ಕಲತಿಯವರು ಮುಖಗಳಲ್ಲಿಯೂ ಸಂತೃಪ್ತಿ, ಹುಮ್ಮಸ್ಸು ಕಾರ್ಯಪೂರ್ತಿಯ ನಲಿವು ಉಕ್ಕಿಬರುತ್ತಲಿದೆ.

ಬಾಬೂ ಮೆಲ್ಲನೆ ಹೆಜ್ಜೆ ಇಡುತ್ತ ಗೋಸಬಾಳದ ಹನುಮಪ್ಪನ ಗುಡಿಯೊಳಗೆ ಸೇರಿದನು. ಗರ್ಭಗುಡಿಯ ಹೊರಗಿನ ಪೌಳಿಯಲ್ಲಿ ತನ್ನ ಚೀಲವನ್ನು ಒಗೆದು, ಮೆಟ್ಟುಗಳನ್ನು ಸಾಲು ಮೆಟ್ಟಿಲುಗಳ ಅಡಿಯಲ್ಲಿ ಇರಿಸಿ ಕಂಬಕ್ಕೆ ಒರಗಿ ಕುಳಿತನು. ಸುತ್ತಲೂ ನಿರೀಕ್ಷಿಸಿದನು. ಗುಡಿಯ ಪೌರಾಣಿಕತೆಯು ಅಚ್ಚಳಿಯದೆ ಉಳಿದಿತ್ತು. ಇಲ್ಲವೆಂದರೆ ಒಂದೆರಡು ಉರುಳಿದ ಕಲ್ಲುಗಳು, ಕುಂಬಗಳ ಸೌಷ್ಟವವನ್ನು ಅಂದಗೆಡಿಸಿದ್ದವು. ದಕ್ಷಿಣದ ಗೋಡೆಯ ಒಂದು ಮೂಲೆಯು ಡೊಗರು ಹಾಯ್ದಿತ್ತು. ಬೇವಿನ ಮರವು ಮತ್ತಿಷ್ಟು ಮುದಿಯಾಗಿತ್ತು. ತನಗೆ ಪರಿಚಿತವಿದ್ದ, ತಾನು ಓಡಾಡುತ್ತಿದ್ದ ಕುಂಬಿಗಳನ್ನೂ, ಓಕುಳಿಯಲ್ಲಿ ಮಧ್ಯರಂಗವೆನಿಸಿದ ಕುಣಿಯನ್ನೂ, ತನ್ನ ತಂದೆ ಸಿದ್ಧಪಡಿಸಿದ ದೇವರ ಮೆಟ್ಟುಗಳನ್ನೂ, ಮುಡುಪಿಟ್ಟ

ಕಣ್ಣುಬಟ್ಟುಗಳನ್ನೂ, ದೇಶಪಾಂಡೆಯರು ಮುಡುಪಿಟ್ಟ ಗೆಜ್ಜೆಯ ಉಡು ದಾರವನ್ನೂ ಅವನು ನಿರೀಕ್ಷಿಸಿದನು. ಆಗಿನ ತನ್ನ ವಯ, ತನ್ನ ಅಣ್ಣನ ಮನಸ್ಸು ಮತ್ತು ಕಮಲಳ ತನ್ನ ಆಟನೋಟಗಳು ಅವನ ಬಗೆಯನ್ನು ಸೆರೆಹಿಡಿದವು. ಘಟನೆಗಳ ನಂಜು ಒಂದು ಕ್ಷಣ ಅವನ ಮೈಯಿಂದ ಇಳಿದು ಭೂತರಂಗದ ಒಂದೊಂದೇ ದೃಶ್ಯಗಳು ಅವನ ಮನೋಪಟಲದ ಮೇಲೆ ಮೂಡಿ ಮೂಡಿ ಅನುಭವಜನ್ಯ ಸುಖದುಃಖಗಳ ಪ್ರತಿರೂಪಗಳು ಮುಃಖದ ವಿಕಾರಗಳಿಂದ ಗೋಚರಿಸುತ್ತಿದ್ದವು. ಅವನ ಕಣ್ಣುಗಳು ತಾವಾಗಿಯೇ ಮುಚ್ಚಿದವು. ನೀರು ದಳದಳನೆ ಸುರಿಯಹತ್ತಿತು. ಶರೀರ ಚಲನವೆಲ್ಲವೂ ಸ್ತಂಭೀಭೂತವಾಗಿ ಭೂಗತ ಶರೀರವು ಮಲೀನವಾದಂತೆ ಅಸ್ತಿತ್ವವೇ ಉಳಿಯದ ಭಾಸವಾಯಿತು. ಭೂತಚಿತ್ರಪಟದಲ್ಲಿ ತಲ್ಲೀನನಾದನು.

ಈ ತನ್ಮಯತೆಯು ಎಷ್ಟು ಕಾಲದ ವರೆಗೆ ಮೂಡಿತೋ ತಿಳಿಯದು. ಅಷ್ಟರಲ್ಲಿ ಓರ್ವ ವ್ಯಕ್ತಿಯು ಬಂದು—

"ಯಾ ಊರವರು ?" ಎಂದು ಕೇಳಿದನು.

ಬಾಬೂ ಕಣ್ದೆರೆದನು. ಸಕ್ಕರೆನಿದ್ದೆಯಲ್ಲಿ ಅವನಿಗೆ ಸ್ವರದ ಪರಿಣಾಮವಾಗಿರಲಿಲ್ಲ. ಕೇಳಿದವನನ್ನು ಒಣಕಣ್ಣುಗಳಿಂದ ನೋಡಿದನು. ಮಾತ್ರ ಮಾತನಾಡಲಿಲ್ಲ.

"ಯಾ ಊರವರು ?" ಮತ್ತೆ ಅದೇ ವ್ಯಕ್ತಿ.

"ಇದೇ !" ಬಾಬೂ ಎದ್ದು ಕುಳಿತನು.

"ಯಾರ ಪೈಕಿ ?"

"ಕುಲಕರ್ಣಿ."

"ಡಾಳಿಂಬರಿ ಗಿಡದ...."

"ಹೂಂ."

"ಆದರ ಅವರು ಊರಾಗ ಇಲ್ಲಿಲ್ಲಾ" ವ್ಯಕ್ತಿ ಅಂದನು. "ಅತ್ತೆಲ್ಲೋ ಹುಡುಗೋರ್ನ ಕಲಸಾಕ ಬೆಳಗಾವಿಗೆ ಹೋಗ್ಯಾರಂತ.... ?

"ಹೌದು."

"ಗೊತ್ತತಿ ನಿಮಗೂ ?"

"ಹೂಂ."

"ಹಾಂಗಾರ...."

"ಇಲ್ಲೆ ಇರಲಿಕ್ಕೆ ಬಂದೀನೀ....."

"ಅವರಿಗೆ ನೀವೇನಾಗಬೇಕು ?"

"ಮಗ....."

"ಹಾಂ....ಹಾಂಗಾರ ಧೀರಪ್ಪ ಏನು ನೀ ?"

"ಬಾಬು."

"ಬಾಬೂ...ಭಲೆ ..ಮನಾರೆ ಬೆಳದಬಿಟ್ಟರಿ....ಗುರ್ತು ಹತ್ತಾಕಿಲ್ಲ." ತುಸು ಸನಿಯಕ್ಕೆ ಬಂದು "ಅಲ್ಲಾ ಕಲಿಯೂದ" ?

"ಮುಗೀತು."

"ಕಲತ ಮಾಮಲೇತಿ ಮಾಡಬೇಕು. ಇಲ್ಲೇನತಿ ?"

"ದನಾ ಕಾಯೂದು !"

"ನಗಸ್ಯಾಟಕೆ ಆಡತೀರಿ ಅಲ್ಲಾ.....

ಬಾಬೂ ಮಾತನಾಡಲಿಲ್ಲ. ಮಾತನಾಡಿಸುವ ವ್ಯಕ್ತಿ ಒಮ್ಮೆಲೇ ಎದ್ದು ಎಂತನು.

"ಗಿರಕೀ ಹೊಡಿಯಾಕ ಬರತೀ ಹಾಂಗಾರ ?"

ಬಾಬೂ ಆ ವ್ಯಕ್ತಿಯ ಕಡೆಗೆ ತುಸು ನೋಡಿದನು. ಮುಗುಳುನಗೆ ನಕ್ಕನು ತನ್ನ ಬಾಲ್ಯದ ಗೀರಕೀವ್ಯಕ್ತಿ ಅವನಿಗೆ ಈಗ ಪರಿಚಯವಾಯಿತು. ಗಿರಕೀ ಹೊಡೆದು ತಂದ ಬಾರೇಹಣ್ಣಿನ ರುಚಿಯು ಈಗಿನ ಅವನ ನಾಲಿಗೆಗೂ ರುಚಿ ತಂದಿತು. ವ್ಯಕ್ತಿಯು ಚಿಟಕೀ ಹೊಡೆಯುತ್ತ ಲಾವಣಿಯ ತುಣುಕುಗಳನ್ನು ನೇವರಿಸುತ್ತ ದಿಡ್ಡೀಬಾಗಿಲದೊಳಗಿಂದ ಹಾದು ಸಮೀಪದ ತೋಟದಲ್ಲಿ ಅದೃಶ್ಯವಾಯಿತು. ಊರಿಗೆ ಕಾಲಿಟ್ಟಾಗ ದೊರಕಿದ ಈ ಬೌದ್ಧಿಕ ಅನಾಹುತದ ದರ್ಶನದಿಂದ ಅವನ ಭವ್ಯ ಕನಸಿನ ಮಂಟಪದಲ್ಲಿ ಒಂದು ಕಡಜೀರಿಗೆಯು ಪ್ರವೇಶವಾದಂತಾಯಿತು. ಪ್ರಸವವೇದನೆಯಿಂದ ಬಳಲಿದಂತೆ ಅವನ ಅಂಗಾಂಗಗಳೆಲ್ಲವೂ ಈ ಘಟನೆಯಿಂದ ನಿರ್ಜೀ

ವಗೊಂಡವು. ದರ್ಶನಮಾತ್ರದಲ್ಲಿಯೇ ಶರಣು ಹೋಗದ ಮಾರುತಿಗೆ ಈಗ ಮನಃಪೂರ್ವಕವಾಗಿ ವಂದಿಸಿ ಈ ಅಪಶಕುನದ ಪರಿಹಾರವಾಗ ಲೆಂದು ಬೇಡಿಕೊಂಡು ಹಿಂಭಾಗದ ಬಾವಿಗೆ ಹೋದನು. ಅಲ್ಲಿ ತಂದ ಬುತ್ತಿ ಯನ್ನು ತಿಂದು ಮನವಾರೆ ನೀರು ಕುಡಿದು ಊರ ಮೆಟ್ಟಲುಗಳನ್ನು ಒಂದೊಂದೇ ಏರಿ ಓಣಿಗೆ ಹತ್ತಿದನು.

ಓಣಿಯ ಒಂದು ಬದಿಗೆ ಸಾಲೆಯ ಬಾಲಕರು ಆಡುತ್ತಿದ್ದರು. ಬಾಬೂನ ದರ್ಶನದಿಂದ ಅವರು ತಮ್ಮ ಆಟವನ್ನು ನಿಲ್ಲಿಸಿ ಅವನ ಸುತ್ತುವ ರಿದರು. ಅವನು ಮುಂದುವರಿದಂತೆ ಇವರು ಅವನನ್ನು ಹಿಂಬಾಲಿಸಿದರು. ಇಬ್ಬರು ಪ್ರೌಢವಿದ್ಯಾರ್ಥಿಗಳು ತಮ್ಮಲ್ಲಿಯೇ ಮಾತನಾಡಹತ್ತಿದರು.

"ಸಾಲೀ ಸಾಹೇಬರೋಲೆ!" ಒಬ್ಬ.

"ಮುಂದೋ ಆಲೆ? ಮಾಸ್ತರಾ? ಬೆಟಗೇರ್ಯಾಗ ಕುಂತಾನು."

"ಹೋಂದು, ಈಗ ಸೂಟಿ ಇಲ್ಲೇನು?"

"ಸಾಬರ ಈಗ ಯಾಕ ಬಂದರೋ?"

"ಯಾಂಬಲ್ಲ!"

"ಊರಾಗ ಇದ್ದಾಗ ೩೦ ದಿನಾ ಸಾಲಿ ತಪ್ಪಿಲ್ಲ ನೋಡ ಮಾಸ್ತರ."

"ಏಟ ಕಲಿಸೀದಾರು?" ಶಿವನ್ಯಾ ನುಡಿದನು.

"ದಡ್ಡ್ಯಾಗ ಬೀಳ ನೀ ಕಲಸತಾರ." ಒಂದನೇಯವನೆಂದ.

"ಸಾಲಿಗಿ ಬರಾಕ ಬ್ಯಾಡಾ ಮಗ್ಗಾ. ಮತ್ತ ಮಾಸ್ತಾರ ಮ್ಯಾಲ ಮಗರೂರಿ ನೋಡ."

ಬಾಬೂ ಇದಾವುದನ್ನೂ ಕೇಳುವಂತಿರಲಿಲ್ಲ. ಅವನು ಬಲಕ್ಕೆ ಹೊರಳಿ ಕೆಲದಾರಿಯನ್ನು ಕ್ರಮಿಸಿದ ಮೇಲೆ ಒಂದು ಮುಚ್ಚಿದ ಮನೆಯ ಎದುರು ನಿಂತನು. ತನ್ನ ಜೇಬಿನೊಳಗಿನ ಕೈಯನ್ನು ತೆಗೆದು ಕೀಲಿಗೆ ಇರಿಸಿದನು. ಕೈಹತ್ತಲಿಲ್ಲ. ಸುತ್ತಲೂ ನೋಡಿದನು. ಬೆನ್ನಿಗೆ ಬಿದ್ದ ಬಾಲಕರಲ್ಲಿಯ ಒಬ್ಬ ಹಿರಿಯನು "ತತರ್‍ರಿ ನನ್ನ ಕೈಯಲ್ಲಿ" ಎಂದು ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡು ತಿರುವಿದನು. ಬರಲಿಲ್ಲ.

"ಶಿವನ್ಯಾ ಒಂದ ಮಳಿ ತತಾರಲೇ ನಿಮ್ಮನ್ಯಾಗಿಂದ"

" ಎಲ್ಲೇತಿ? "

" ಮೊನ್ನೆ ನಿಮ್ಮಪ್ಪ ಮಳೀಳೆ ಇದ ಕೀಲಿ ತಗದಿಲ್ಲೇನ. ಹೋಗು " ಶಿವನ್ಯಾ ಓಡಿದನು.

" ಈ ಕೀಲಿ ಮುರದಾರ? " ಬಾಬೂ ಕೇಳಿದನು.

" ಇವರಪ್ಪ ಮೊನ್ನೆ ಮಳಿಹೆಚ್ಚಿ ತಗದರಿ. "

" ಯಾಕ? "

" ಕಣಿಕೀ ಇಡಾಕ "

" ಎಲ್ಲೆ ? "

"ಬಂಕದಾಗ. "

" ಯಾಕ ತಮ್ಮ ಮನ್ಯಾಗ ತಾವಿಲ್ಲೇನು? "

" ಮನ್ಯಾಗ ತಾವಿದ್ದರ ಮಂದೀಮನೀ ಮುರಿತಿದ್ದರ್ಯಾಕ? " ಪ್ರೌಢ ನೆಂದ. " ನಿಮ್ಮ ತ್ವಾಟಾ ಹಿಡಿದ್ದಾನಂತ ನಿಮ್ಮ ಮನಿ ಗುತ್ತಿಗಿ ಅಂತ ತಿಳದ್ದಾನೋ ಯಾಂಬಲ್ಲ! "

" ಯಾವ ತೋಟಾ? ಊರ ಮುಂದಿಂದು? " ಬಾಬೂ.

" ಹೊಂದು. ನಿಮಗ ಗೊಂತಿಲ್ಲ? "

" ಎಲ್ಲಾ ಗೊತ್ತು ಮಾಡಿಕೋಳಿಕ್ಕೆ ಬಂದೀನಿ. "

" ಏನ ಮಾಡತೀರಿ ಇಲ್ಲಿ? "

"ನಟ್ಟಿ ಕಡೀತೀನಿ....ನೇಗಲಾ ಹೊಡೀತೀನಿ......." ಬಾಬೂ ಅಂದ.

" ಗುದ್ದಲೀ ಹಿಡಿಯಾಕ ಬರತತ್ತ್ಯೋ ಇಲ್ಲೋ! " ಪ್ರೌಢ ನಕ್ಕನು.

ಸುತ್ತಲೂ ನಿಂತ ಬಾಲಕರಲ್ಲಿಯೂ ಒಂದು ನಗೆಯ ಸೆಳಕು ಬಾಬೂನನ್ನು ಬಿರಿಯುತ್ತ ಬಂದಿತು. ಬಾಬೂ ಅದನ್ನು ಕೇಳುತ್ತ ಕಾವೇರಿದನು. ಆದರೆ ಅದೊಂದು ನಗೆಯು ಝುಳುಕು ಮಾತ್ರ. ಅದರಲ್ಲಿ ಯಾವತರದ ವಿಮರ್ಶೆಯು ಕುಟುಕತನವೂ ಇರಲಿಲ್ಲವೆಂದು ಮನದಂದು, " ನಿನ್ನಂಥ ಗುದ್ದಲೀಬಂಟ ಇರಲಿಕ್ಕೆ ನಾಯಾಕ ಹಿಡಿಯಬೇಕು? " ಬಾಬೂ ಅಂದನು. ಮತ್ತೆ ಬಾಲಕರ ಸಮೂಹ ನಕ್ಕಿತು. ಈ ಸಲ ಪ್ರೌಢನ ಮೋರೆ ಚಿಕ್ಕದಾಯಿತು.

---

—ಬಾಸಿಂಗಬಲ

" ನನಗೂ ಗುದ್ದಲಿ ಅಂದರ ವಾರಿ ಬಿಡರಿ. " ಅವನು ಒಪ್ಪಿದ.

ಶಿವನ್ಯಾ ಮೊಳೆ ತಂದನು. ಪ್ರೌಢ ಅದನ್ನು ಒಂದೆರಡು ಸಲ ತಿರುವಿದನು. ಬರಲಿಲ್ಲ.

" ಚನ್ನಪ್ಪಾ ಮೊಳೆ ಹಾಕಿ ಬೆಟಗೇರಿ ಕೀಲಿ ಕೆಡಸಿಬಿಟ್ಟ್ಯಾನ. " ಪ್ರೌಢನೆಂದ.

ಪ್ರೌಢನು ಮತ್ತೆ ಒಂದೆರಡು ಸಲ ಮೊಳೆಯನ್ನಾಡಿಸಿ ಅದನ್ನು ತೆರೆದನು. ಮೊದಲು ಬಾಬೂ ಒಳಹೊಕ್ಕನು. ಅವನ ಬೆನ್ನ ಹಿಂದಿಂದೆ ಬಾಲಕರ ಸಮೂಹವು " ಹುರ್ರ್ರೋ " ಎಂದು ಒಳನುಗ್ಗಿತು ಬಾಬು ಒಳಗೆ ನೋಡಿದನು. ಎಡಕ್ಕೆ ಕಣಿಕೆಯು ರಾಶಿಯಾಗಿ ಒಟ್ಟಿತ್ತು. ಪಡಸಾಲೆಯ ತುಂಬೆಲ್ಲವೂ ಕಣಿಕೆ, ರವದೆ, ಸೆಗಣಿ, ಲೆಕ್ಕವಿಲ್ಲದೆ ಬಿದ್ದಿದ್ದವು ಪ್ರೌಢರು ಪಡಸಾಲೆಯಲ್ಲಿ ಬಿದ್ದ ಕಸಬರಿಗೆಯನ್ನು ತಕ್ಕೊಂಡು ಕಸಗುಡಿಸಿದರು. ಉಳಿದ ಬಾಲಕರೂ ದಂಟುರವದೆಗಳನ್ನು ಕೂಡಿಸಿ ಇರಿಸಿದರು. ಬಾಬೂ ನಡುಮನೆಯ ಬಾಗಿಲ ಕೀಲಿಯನ್ನು ತೆರೆದು ತನ್ನ ಗಂಟುಗದಡಿಗಳನ್ನಿರಿಸಿದನು. ಒಳಗಿನ ಒಂದು ಜಮುಖಾನೆಯನ್ನು ತಂದು ಹಾಸಿದನು.

" ಇನ್ನ ಹೋಗರೆಪಾ ಎಲ್ಲರು ನನಗೆ ದಣವಾಗೇದ. ಅಡ್ಡಾಗತೀನಿ. " ಬಾಬೂ ಅಂದನು.

" ಹೋಗರೋ! " ಇಬ್ಬರೂ ಪ್ರೌಢರು ಎಲ್ಲ ಹುಡುಗರನ್ನು ಹೊರಗೆ ಹಾಕಿದರು. " ನೀವೂ ಹೋಗರಿ.... ಇನ್ನ....ಶಿವನ್ಯಾ...ನಿಮ್ಮಪ್ಪ ಚನವೀರನ್ನ ಅಷ್ಟ ಬಾ ಅನ್ನು. "

" ಹೂನ್ರಿ........"

ಎಲ್ಲರೂ ಹೋದರು.

ಶುಭ್ರವಾದ ಬೆಳದಿಂಗಳು ಮನೆಯ ಹೊರವಲಯವನ್ನು ಬೆಳಗಹತ್ತಿತು. ತಾನು ಚಿಕ್ಕಂದಿನಲ್ಲಿ ನೀರುಹಾಕಿ ಬೆಳಸಿದ ದಾಳಿಂಬವು ಒಣಗಿ ನಿಂತಿತ್ತು. ಕರಿಬೇವು ತಲೆಗಷ್ಟು ನಾಲ್ಕು ಕಡ್ಡಿಗಳನ್ನು ಸಿಕ್ಕಿಸಿಕೊಂಡು ಕೆಂದು ಇಂಡಿಯನರಂತೆ ಉದ್ದವಾಗಿ ಬಡಕಲಾಗಿ ಮೂಲೆಯಲ್ಲಿ ಜಾಡಬೂಡವನ್ನು ಬಡಿಯಲು ಒಂದು ಗಳಕ್ಕೆ ಕಟ್ಟಿದ್ದ ಕಸಬರಿಗೆಯಂತಿತ್ತು. ಬಚ್ಚ

ಲದ ಹಾಸುಗಲ್ಲು ಹಾರಿಹೋಗಿ ಅಲ್ಲಿ ತಗ್ಗಾಗಿತ್ತು. ಸುತ್ತಲಿನ ಒಂಡೆಯೂ ಒಡೆದು ಬೀಳಲಾಗಿತ್ತು.

ಚನ್ನವೀರನು ಬಂದನು.

" ಶರಣರಿ ಧಣೇರ........ಬಂದ ಬಾಳೊತ್ತಾತೇನೋ? "

" ಇಲ್ಲಪಾ .......ಇದೇ ಬಂದೆ ಬಾ........ಕೂಡು...."

" ಈ ಗೊಳೇ ಬಂದರಿ? "

" ಬಂದೇ....ಆತು...."

" ಅವ್ವಾ ಅವರು ಬೇಸಿ ಅದಾರ್ರಿ....? "

" ಹೂಂ...."

" ಮತ್ತ ಧೀರಪ್ಪ.... ಕವ್ವ್ಮವ್ವ..."

" ಎಲ್ಲರೂ ಬೇಸಿ ಅದಾರು. "

" ಇದೇ ಈಗ ಶಿವನ್ಯಾ ಅಂತಿದ್ದಾ. ಮತ್ತೇನೋ ಇಲ್ಲಿ ಕಣಿಕೀ ಇಟ್ಟದ್ದಕ್ಕ ಬಾಯ್ಮಾಡಿದರಂತ. ವ:ನ್ಯಾಗ ತಾಂವಿಲ್ಲಂತ ಇಲ್ಲಿ ಇಟ್ಟೇನಿ.... ಅಟ ಮಳಿ ಸರೀತ ಅಂದರ ತೋಟಕ್ಕ ಸಾಗಸತೀನಿ. "

" ಆದರ ನೀ ಇಲ್ಲಿ ಕಣಿಕೀ ತಗೀಬೇಕು. "

" ತಗೀತೀನಿ ಬಿಡರಿ. " ಇರಲಿ ಎಂದು ಬಾಬು ಅನ್ನುವನೆಂದೇ ಅವನ ಹಾರೈಕೆ.

" ನಾಳೆ ನಾ ಒಂದು ಜೋಡ ಎತ್ತ ಕಟ್ಟಾಂವ. ಮತ್ತ ನನಗೂ ಮೇವು ಮಿಡಚಿ ಇಡಾಕ ತಾಂವ ಬೇಕಲ್ಲಾ. "

" ನೀವು ಜೋಡೆತ್ತ ಕಟ್ಟತೀರಿ? "

" ಹೌದು. ಈ ಸಲ ಊರ ಮುಂದಿನ ತೋಟಾ ಪಾಲಲೇ ಕೊಡಬೇಕು. ಈ ತಿಂಗಳಿಗೆ ನಿನ್ನ ಲಾವಣೀಪತ್ರ ಮುಗೀತು. ನಾನೂ ಜೋಡೆತ್ತ ಕಟ್ಟತೀನಿ. ನೀನೂ ಕಟ್ಟು. ಇಬ್ಬರೂ ಕೂಡಿ ಕಬ್ಬಾ, ಸವತೀ, ಬದನೀ ಹಾಕಿಬೀಡೂಣ. ನೀರು ಪುರವಠೆ ಆದ್ರ ಒಂದು ಮಗಿ ಎಲಿ ಬಳ್ಳಿ ಬೆಳಸೋಣ........ಏನಂತಿ? "

---

—ಬಾಸಿಂಗಬಲ

“ಕಲತವರ ನೇಗಲ ಹಿಡದರ ಭೂಮಿತಾಯಿಗೆ ಏನ ಬರಾವು.” ಚನ್ನವೀರ ಹುಸಿನಗುತ್ತ ಅಂದನು. “ನಂದೇನ್ರಿ........ಧಣೇರ ಹೇಳಿದತ್ತ ಕೊಡಿ ಹಿಡಿಯಾವ.”

“ಒಪ್ಪಿತು ಹಾಂಗಾರ.......ನಾ ಎತ್ತ ಕೊಳ್ಳಲಿಕ್ಕೆ ಮೂಡಲಗಿಗೆ ಹೋಗತೀನಿ. ಅಷ್ಟೊತ್ತಿನಾಗ ನಿನ್ನ ಕಣಿಕೀ ತಗಸೀರು........”

“ಅದರ ಚಿಂತೀ ಬಿಡರಿ.”

ಮುಂದೆ ಕೆಲಹೊತ್ತ ಮಾತನಾಡಿ ಚನ್ನವೀರ ಮನೆಗೆ ಹೋದನು. ಬಾಬೂ ಮುಂದಿನ ಕನಸು ಕಾಣುತ್ತ ನಿದ್ದೆಹೋದನು.

---

## ೨ ಯೂಯೂ. * * *

ಚನ್ನವೀರನು ಖಿನ್ನನಾಗಿ ಮನೆಗೆ ತಿರುಗಿದನು. ಬೆಳದಿಂಗಳು ನಿಚ್ಚಳವಾಗಿ ಗುರುತಿಸುವಷ್ಟು ಪ್ರಕಾಶವನ್ನು ಬೀರುತ್ತಿತ್ತು. ಅದರ ತಂಪು ಚನ್ನವೀರನ ತಲೆಯ ಕಾವನ್ನು ತಗ್ಗಿಸಲಿಲ್ಲ. ಅವನು ಚಂಚಲನಾಗಿ, ತುಮುಲವಿಪ್ಲವದೊಡಗೂಡಿದ ಜಡಮನಸ್ಸನ್ನು ಹೊತ್ತುಕೊಂಡು ನಡೆವಾಗ ಕಾಲುಗಳು ಕೀಳದಾದವು. ವೃಂದಾವನದಲ್ಲಿ ಇಪ್ಪತ್ತುವರುಷ ಸುಖೋಪಭೋಗಿಸಿದ ಕಾಮಿನಿಗೆ “ಇಲ್ಲಿಂದ ತೆರಳು” ಎಂಬ ಆಜ್ಞೆ ಜಾರಿಯಾದ ಕೂಡಲೇ ಆಕೆಗಾಗುವಷ್ಟು ದುಃಖಾತಿರೇಕದ ತಳಮಳವು ಅವನ ಮೈಮನಗಳಿಗೆ ಸಂವೇದನೆಯನ್ನು ನೀಡುತ್ತಿತ್ತು.

ಚನ್ನವೀರನು ಮನೆಯ ಸಮೀಪಕ್ಕೆ ಬಂದನು. ದೂರದಲ್ಲಿ ಬಾಲಕರು ತಿಳ್ಳೀ ಆಡುತ್ತಿದ್ದರು. ಶಿವನ್ಯಾನ “ಸೈ!” ಸ್ವರವು ಅವನ ಕರ್ಣಪಟಲವನ್ನು ಭೇದಿಸಿತು. ಅವನು ನಡುಗುತ್ತೇ ಹೋಗಿ ಅವನ ಕಿವಿಯ

ಗಡ್ಡೆಯನ್ನು ಹಿಡಿದುಕೊಂಡು ಮನೆಗೆ ಬಂದನು. ಅವನನ್ನು ಒಳಗೆ ನೂಕಿ ಆರ್ಭಟಿಸಿದನು.

" ಲೇ ಕಣಕೀ ಕೊರೀ ಅಂದರ ಆಟಕ್ಕ ಹೋಗೀದ್ಯಾ!"

" ಈಗ ಕೊರೀತಿದ್ನಿ. "

" ಈಗ ಕೊರೀತಿದ್ದಂತ. " ಒಂದು ಗೆಬ್ಬಿಗೆ ಕೊಟ್ಟು ಚನ್ನವೀರನು ನುಡಿದನು. " ಎದೀವ್ಯಾಲ ಕೆಲಸಾ ಇಟಕೊಂಡು ಹೊರಗ ಪಟ್ಟಂಗಿ ಆಡ ತಾನ!........ಇತ್ತ ಸಾಲಿಗೆ ಶರಣ ಹೊಡದಾ... ಹೊಲಕ್ಕ ಒಂದಿನಾ ಬುತ್ತೀ ತರಲಿಲ್ಲಾ....ಒಂದ ಕೊಡಾ ನೀರು ದನಕ್ಕ ಕುಡಿಸಲಿಲ್ಲಾ.......ನುನ್ಯಾಗ ನೀಯೇನ ಜೋಕನೂರ ಅಂತ ತಿಳಿದ್ದೀ ಏನ ಉಂಡ ಕೆಲಿಯಾಕ? "

" ಸಾಲೀ ಬಿಡಿಸಿ ನೀನ ಕುರಿಕಾಯಾಕ ಹಚ್ಚಿದಿ. ನೆರೆಮನೆ ಪಾಂಡ್ಯಾ ಇಲ್ಲೀನ ನನ್ನ ವಾರಗೀ... ಈಸಲ ಮುಲಕೀ ಕುಂತಾನು."

" ಎದರ ಮಾತಾಡಬ್ಯಾಡ. ಮುನ್ಯೋಡಿ ಕಣಕೀ ಕಡಿ. " ಎನ್ನುತ್ತ ಚನ್ನವೀರನು ಕುಡಗೋಲು ತರಲಿಕ್ಕೆ ಕಟ್ಟಿ ಹತ್ತಿದನು. ಬದಿಯಲ್ಲಿದ್ದ ಕಿಲಾರಿ ಎತ್ತು ಅವನನ್ನು ಇರಿಯಿತು. ನೋವನ್ನು ತಾಳಲಾರದೆ ಚನ್ನವೀರನು ಕಟ್ಟಿಯ ಮೇಲೆ " ಹಂಯ್ಯೋ ಯಪ್ಪಾ. " ಎಂದು ಕೆಳಕ್ಕೆ ಬಿದ್ದನು. ಶಿವನ್ಯಾ ಮತ್ತು ಒಳಕ್ಕೆ ರೊಟ್ಟಿ ಬಡೆಯುತ್ತಿದ್ದ ಅವನ ತಾಯಿ ಇಬ್ಬರೂ ಬಂದರು. " ಏನಾತು ? " ಎಂದು ಕೇಳಿದರು. ಪೆಟ್ಟು ಬಹಳ ಹತ್ತಿರಲಿಲ್ಲ. ಕೋಡು ಮಾಡಿದ ನೆತ್ತಿಯಿಂದ ದನ ನುಗಿಸಿತ್ತು. ಆದರೆ ಅದು ಆಕಸ್ಮಿಕವಾದುದರಿಂದ ಗಾಬರಿಯಿಂದಲೇ ಅವನ ಗಾಯ ವೃದ್ಧಿಯಾಗಿತ್ತು. ಅವರಿಬ್ಬರು ಅವನನ್ನು ಎತ್ತಿ ಹಿಡಿದ ಕೂಡಲೇ ಚನ್ನವೀರ ಸಾವರಿಸಿಕೊಂಡು ಎದ್ದು ನಿಂತನು ಬದಿಯಲ್ಲಿದ್ದ ಒಂದು ಬಾರಕೋಲನ್ನು ತೆಗೆದುಕೊಂಡು ಕಿಲಾರಿಯನ್ನು ಥಳಿಸ ಹತ್ತಿದನು.

" ಐ ಬಿಡ... ಆದನ್ಯಾಕ ಬಡೀತಿ....ಅದ ಇರಕಳ ಅಂತ ಗೊಂತಿದ್ದೂ ಅದರ ಬಡ್ಡ್ಯಾಗ ಯಾಕ ಹೋಗಿದ್ದಿ..."

" ಬಿಡ ಬಿಡ ಅದರ ಚರ್ಮಾ ಸುಲೀತೀನಿ. "

—ಬಾಸಿಂಗಬಲ

" ಯಾಕ ಸೆರೆ ಕುಡದ ಬಂದೀಯೇನ ? ಎಲ್ಲಾರ ಮ್ಯಾಲ ಹೆರೀ ಹಾಯತೀ. "

" ಹೌಂದ ! ಹೌಂದ !! ಕುಡಿ ಅಂತ ಪಿರತಿಲೇ ಅತ್ತಿ ಒಂದು ಮಗಿ ಕಳಿಸಿದ್ದಳ ಅದ ಗಿಡದಾಗಿಂದ ಇಳಿಸಿ. "

" ಅಲ್ಲ ! ಈ ದಿನಾ ಆಗೇ ತೆರೆ ಏನ ? "

" ಯವ್ವಾ ಬಾಬೂರಾಯ ಬಂದಾನು ! ಇದೇ ಈಗ ಅಲ್ಲಿಂದ ಬಂದ ಯಪ್ಪಾ. " ಶಿವನ್ಯಾ ಕಾರಣ ಸೂಚಿಸಿದನು.

" ಧಣೇರ ಬಂದಾರು ? "

" ಹೌಂದ ! "

" ಏನಂದರು ? "

" ಸಾಯಂತಾರು. "

" ಅದ್ಯಾಕ.... "

" ನಿನಗ ಯಾಕ ಅದರ ಪಂಚಾತಿ ರೊಟ್ಟಿ ಬಡೀ ಹೋಗ. "

" ಐ ? ರೊಟ್ಟಿ ಬಡಿಯೂದು ನನ್ನ ಜನ್ಮಕ್ಕ ಹತ್ತೇತಿ ಬಿಡ....ಅಂದ ಠರೆ ಏನ ಹೇಳ.....ಅಂಜೀದೀ ಏನ ? "

" ಅಂಜಾಕ ನನಗೇನ ಮಲಿ ಮೂಡಿಲ್ಲ. "

" ಹೇಳಲಾ ಹಾಂಗರ ಗಂಡಿಸಿದ್ದಾವ "

" ಹೊಲಾ....ಪಾಲಿಲೇ ಮಾಡತಾರಂತ. "

" ಮಾಡಲೆಲಾ....ಅದರಾಗೇನತಿ...ಧಣೇರು ಅದಾರು. ಹೊಲಾ ಅತಿ. ದುಡದಷ್ಟು ಅದಾ೯ ಕೂಲಿ ಸಿಗತತಿ. "

" ಹಾಂಗಾರ ತಿನ್ನ ಸೆಗಣಿ. "

" ನಮಗೇನ ಕಮತರತ ಐತಿ....ಆ ಕಲ್ಲ ಹೊಲಾ ಅಟ ಚಲೂ ಗೊಬ್ಬರಾ ಹಾಕಿ ಬಿತ್ತ್ತೂಣು....ತತಿಗೆ ಸರಿಯಾಗಿ ಒಂದು ಮಳೆ ಹೊಡೀತು ಅಂದರ ಹದಿನೈದು ಚೀಲ ಕಾಳ ಬರತೈತಿ....ನಮ್ಮನ್ಯಾಗ ಯಾರ ಅದಾರ ತಿನ್ನಾವರ...."

ತಾನು ಗಳಿಸಿದ ಹೊಲದ ಈ ಬಣ್ಣನೆಯನ್ನು ಕೇಳಿ ಚನ್ನವೀರನಿಗೆ ತುಸು ಸಮಾಧಾನವಾಯಿತು. ಆದರೂ ಅವನ ಸಿಟ್ಟು ಕಡಮೆಯಾಗಲಿಲ್ಲ.

"ರೊಟ್ಟೀ ಬಡದೀದೇನ? "

" ಹೂಂ...."

" ನೀಡ ನಡಿ ಹಾಂಗಾರ. "

ಹೆಂಡತಿ ಒಳಕ್ಕೆ ಹೋದಳು.

" ಮತ್ತ ಕಣಕಿ ? " ಶಿವನ್ಯಾ ಕೇಳಿದನು.

" ಬಕ್ಕರಿಸಿ ಕಡಿ ನಡಿ. " ಚನ್ನವೀರ ನುಡಿದನು.

ಆ ದಿನ ರಾತ್ರಿ ಚನ್ನವೀರನಿಗೆ ನಿದ್ದೆ ಹತ್ತಲಿಲ್ಲ. ಭವಿಷ್ಯತ್ತಿನ ಸುಖವು ದುಃಖಪರ್ಯವಸಾನವಾಗುತ್ತದೆಂದು ವಿಚಾರಿಸುವದೇ ಅವನಿಗೆ ಅಸಹ್ಯವಾಯಿತು. ಅವನ ಕನಸು ತುಣುಕು ಮಿಣುಕುಗಳಾಗಿ ಹದನ ಏಣುಗಳು ಅವನ ಮನದ ಅಂತರಾಳವನ್ನು ಕರಗಸದಂತೆ ಕೊರೆಯ ಹತ್ತಿದವು.

ಬೆಳಗಿನ ಜಾವ ಅವನು ತಡಮಾಡಿ ಎದ್ದನು. ಮುರುವು ಇಟ್ಟು ಎಮ್ಮೆಯನ್ನು ಹಿಂಡಿದನು.

" ಧಣೇರಿಗೆ ಒಂದು ಪಾವು ಕೊಟ್ಟ ಬಾ " ಹೆಂಡತಿಗೆ ಹೇಳಿದನು.

" ವರತನಿಗೆ ಕಡಿಮೆ ಬೀಳತತೆಲ್ಲಾ. "

" ಕರಾ ಕುಡೀತಂತ ಹೇಳ. " ಚನ್ನವೀರ ನುಡಿದನು. " ಭಾಳ ದಿವಸಕ ಧಣೇರ ಬಂದಾರು....ಕೊಡದಿದ್ರ ಹ್ಯಾಂಗ ! "

" ವರಸಾ ಇದ್ದೂರಾಗ ಇದ್ದರ ತಟಕ ಮಜ್ಜಿಗೀ ಸಿಡಸಲಿಲ್ಲಾ. ಈಗ ಹಾಲ ಕೊಡಾವ...." ಹೆಂಡತಿ ಅಣಕಿಸಿದಳು.... " ಏನರೇ....... ಬಲೀ ಹಾಕತೀಯೇನ ಮತ್ತ. "

"ನಿನಗೂ ಪಂಚಾತಿ ಬಾಳಲೇ. ಇದೊಂದ ದಿನಾ ಕೊಡ....ನಾಳೆ ವರತನಿ ಹಚ್ಚಿ‌ಯ್ರ....ಮನಿಯಾಗ ಹೈನಿದ್ದು ಪಾವ ಕೂಡದಿದ್ರ ಜನಾ ಏನಂದೀತ ...ನಾ ಹೊಕ್ಕೀನಿ...." ಎಂದು ಬಾರಕೋಲ ಹೆಗಲಿಗೇರಿಸಿದನು.

" ಮತ್ತ ನ್ಯಾರಿ ! "

---

—ಬಾಸಿಂಗಬಲ

" ಯಡ್ಡ ಶಿೊಟ್ಟಿ ಕಟ್ಟಿ ತಾ. "

" ತಿಂದ ಹೋಗಲಾ ! "

" ಹೊತ್ತಾಗೇತಿ ತತಾ....ಅಲ್ಲೇ ಉಳ್ಳೀಗಡ್ಡಿ ಕಿತ್ತಿ ತಿಂತೀನ. "

" ಮತ್ತ ಮಧ್ದಿನಕ ಬುತ್ತೀ ತರಬೇಕೇನ ? "

" ಬ್ಯಾಡ...ನಾನ ಬರತೀನಿ...ಇತ್ತ. "

ಚನ್ನವೀರನು ಕಿಲಾಂಗಳನ್ನು ಬಿಚ್ಚಿ ಬುತ್ತಿಯ ಗಂಟನ್ನು ತಕ್ಕೊಂಡು ಹೊರಗೆ ಬಂದನು.

" ಶಿವ್ಯಾ ಎದ್ದಿಲ್ಲೇನ ಇನ್ನಾ ? "

" ಇಲ್ಲ.....ಮಲಗಲೇಳ ...ನಿನ್ನೆ ಕಣಿಕೀ ಕಡದ ದಣದೇತಿ. "

" ಹಾಂಗ ಬಿಟ್ಟರ ಸಂಜೀಮಟಾ ಮಲಗತಾನ ಅವಾ...ಗಡಾನ ಎಬ್ಬಿಸಿ ಅಡವಿಗೆ ಅಟ್ಟು. "

ಚನ್ನವೀರನು ದನಗಳನ್ನು ಹೊಡೆದುಕೊಂಡು ತೋಟಕ್ಕೆ ಬಂದನು. ಚಪ್ಪರದಲ್ಲಿ ಅವುಗಳನ್ನು ಕಟ್ಟಿ ಮೇವು ಮುರಿದು ಹಾಕಿ ಬಾವಿಯ ಕಡೆಗೆ ಬಂದನು. ಬಾರಿಯಲ್ಲಿ ಯಾರೋ ಕುಳಿತಿದ್ದರು.

" ಯಾರವರು.... ? "

" ಯಾಕೋ ಚನ್ನಾ....ತಡಾಮಾಡಿದೀ ? "

" ಧಣೇರೇನ ?...ನಿನ್ನೆ ಗಡಾನ ನಿದ್ದೆ ಹತ್ತಲಿಲ್ಲಾ...ಬಾವಿಯಾಗ ಏನ ನೋಡತಿದ್ರಿ ? "

" ನೀರ ಎಷ್ಟ ಅದಾವು ? "

" ಒಂದ ಎಡ್ಡ ಆಳ ಇರಬೇಕ. "

" ಎಡ್ಡ ಮಟ್ಟ ಪುರತೆ ಆದೀತು ? "

" ಆದೋತಲಾ ! ಬ್ಯಾಡಾ ಇನ್ನೊಂದೆಡ್ಡ ಮಾರು ಕಡಿಸಿದರಾತು. "

" ಚನ್ನಾ ಬಾರಿ ನೆಲಬುರಕಿ ಬಾಳ ಆಗೇತಿ. "

" ಯಾಕರಿ ಯಪ್ಪಾ ? "

" ಈ ತಾವು ಪಡಾ ಬಿಟ್ಟೇ ಅಲ್ಲಾ....ಇಲ್ಲೆ ನೀರು ಹರಿಯೂದುಲ್ಲಾ!"

" ಹರೀದ ಏನರೀ....ಆಟ ಕಾಲಿವೆ ಇಲ್ಲಿ ಎತ್ತರಿಸಿ ಹಾಂಗ....ಇಳವಿ ಒಯ್ಯಬೇಕರಿ....ಈ ಎಡ್ಡ ಕೂರಿಗಿ ನೀರೆಲ್ಲಾ ಉಣತತಿ. "

" ಹಾಂಗಾರ ಇದ ಬಿಟ್ಟೇದಿ ಯಾಕ ? "

" ಒಂದ ಬಾರೀ ನೀರ ಎಲ್ಲಾ ಕಡೆ ಪೂರೋಟಿ ಆಗಬೇಕಲ್ಲರಿ..... ಹುತ್ತ ಆ ತಾವು ಹಿಡಿದರ ಒಂದೆಡ್ಡ ಹೆಣ್ಣಾಳ ಬೇಕರಿ. ಹೆಂಡತಿ ಒಂದು ಗಿಡ್ಡ ಪೋರಗ ಇದ ಹ್ಯಾಂಗ ನೀಗೀತರಿ ?"

ದೂರದಿಂದ ಗೆಜ್ಜೆಗಳ ಮಂಜುಲನಿನದವು ನಿಧಾನವಾಗಿ ಕೇರವಾ ತಾಲ ಅಂಕಿತವಾಗಿ ಬರಹತ್ತಿತು. ಇಬ್ಬರೂ ಕಿವಿಗೊಟ್ಟು ಆಲಿಸಿದರು.

" ಏನದು ? " ಬಾಬು ವಿಚಾರಿಸಿದನು.

" ಚಕ್ಕಡಿ ಇರಬೇಕರಿ ! " ಚನ್ನವೀರ ತರ್ಕಿಸಿದನು.

ಚನ್ನವೀರನ ತರ್ಕವು ನಿಜವಾಯಿತು. ಕಳ್ಳಿಯ ಸಾಲಿನೊಳಗಿಂದ ಒಂದು ಸವಾರೀ ಬಂಡಿಯು ಗೋಚರವಾಗಹತ್ತಿತು. ಶುಭ್ರವಾದ ಎತ್ತುಗಳಿಗೆ ರಕ್ತವರ್ಣದ ಜೂಲು ಹಾಗಿದ್ದರು. ಕೊರಳುಗಳಲ್ಲಿ ಎರಕಹೊಯ್ದ ಗೆಜ್ಜೆಯ ಸಾಲುಗಳು ನೇತಾಡುತ್ತಿದ್ದವು. ಹೆಜ್ಜೆಯ ಒಂದು ಎತ್ತಡಕ್ಕೆ, ಕೊರಳ ಒಂದು ಮಣಿತಕ್ಕೆ, ನೊಗದ ಒಂದು ಎಳೆತಕ್ಕೆ ಅಲುಗಿದ ಗೆಜ್ಜೆಗಳು ತಾಲಬದ್ಧವಾಗಿ ಲಯಬದ್ಧವಾಗಿ ರಾಗಗೂಡಿಸುತ್ತಿದ್ದವು. ಸವಾರಿಗೆ ಬೆತ್ತಕಟ್ಟಿ ಮೇಲೆ ಪಟ್ಟೆಪಟ್ಟೆ ಜಮುಖಾನೆಯನ್ನು ಬಿಗಿದಿದ್ದರು. ಬಂಡಿಯು ಬಹಳ ಜಡವಿಲ್ಲದ್ದರಿಂದಲೂ, ಎತ್ತುಗಳು ಪುಷ್ಟವಾಗಿದ್ದುದರಿಂದಲೂ ಅವುಗಳ ನಡಿಗೆಯೇ ಸಾಮಾನ್ಯ ಎತ್ತುಗಳ ಓಟವಾದಂತಿತ್ತು. ಚಕ್ಕಡಿಯು ತೋಟದ ಹತ್ತರ ನಿಂತಂತಾಯಿತು. ಸ್ವರದ ಲಯಬದ್ಧತೆಯು ಅಸಂಬದ್ಧವಾಯಿತು.

" ನಿಮ್ಮ ಪೈಕಿ ಏನ ? " ಬಾಬೂ ಕೇಳಿದನು.

" ನೀರ ಕುಡಿಯಾಕ ಬಂದಿರಬೇಕು. " ಚನ್ನವೀರನು ನುಡಿದನು.

ಈ ಸಲಮಾತ್ರ ಚನ್ನವೀರನ ತರ್ಕ ಹುಸಿಹೋಯಿತು. ಗಾಡಿಯೊಳಗಿಂದ ಒಬ್ಬ ಹೆಣ್ಣುಮಗಳು ಇಳಿದು ಚನ್ನವೀರನು ಕಡೆಗೇ ಬಂದಳು. ಅವಳು ಸನಿಯಕ್ಕೆ ಬಂದಂತೆ ಚನ್ನವೀರನ ಮುಖಭಂಗಿಯು ಬದಲುತ್ತ

ಹೋಯಿತು. ಅವಳು ಸಮೀಪಕ್ಕೆ ಬಂದು ನಿಂತಕೂಡಲೇ ಅವನ ಮೋರೆಯ ಮೇಲೆ, ಆನಂದ, ಉದ್ಗಾರ, ಆಶ್ಚರ್ಯಗಳು ಒಡಮೂಡಿದವು.

" ಯಾಯಾ ! " ಚನ್ನವೀರನು ನುಡಿದನು. " ಯಾವಾಗ ಬಂದಿ ? "

" ಇದ ಅಸ ನೀರ ತಾ ಕುಡಿಯಾಕ "

ಚನ್ನವೀರನು ಚಪ್ಪರದ ಕಡೆಗೆ ಹೋದನು. ಯಾಯಾ ನೊಗದ ಮೇಲೆ ಕುಳಿತು ಬಾಬೂನ ಕಡೆಗೆ ನೋಡಿದಳು.

" ಧಣೇರ ಹೋಂದ ? " ಯಾಯಾ ಕೇಳಿದಳು.

" ಹೌದು ! " ಬಾಬೂ ಉತ್ತರಿಸಿದನು. ಅವಳ ಕಡೆಗೆ ನೋಡಿದನು. ಅವನಿಗೆ ವಿಚಿತ್ರವೆನಿಸಿತು. ಅವಳ ಮೋರೆಯ ಮೇಲೆ ಸಂಸ್ಕೃತಿಯ ಛಾಯೆ ಮೂಡಿತ್ತು. ಅವಳ ಬಣ್ಣ ಉಚ್ಚಕುಲವನ್ನು ಸಾರುತ್ತಿತ್ತು. ಆದರೆ ಅವಳ ವೇಷಭೂಷ ನುಡಿಗಳು ಇನ್ನೊಂದು ಸಂಸ್ಕೃತಿಯ ಪ್ರತೀಕವಾಗಿದ್ದವು ಈ ಸಂಸ್ಕೃತಿಯ ಸಂಕರದ ಮೂರ್ತಿಯ ಮುಗ್ಧವಾದ ಮುಖ, ಶುಭ್ರವಾದ ದನಪಂಕ್ತಿಗಳು, ಕಳೆಕಟ್ಟುವ ನೇತ್ರದ್ವಯಗಳು, ಕಣ್ಣುಗಳಿಗೆ ಅಂಕಿತವಾದ ಸರಲವಾದ ಮೂಗು, ಹೇವಬಟ್ಟು ಆರಕ್ತವಾದ ತುಟಿಗಳು, ಇವೆಲ್ಲವುಗಳನ್ನು ಒಳಗೊಳಲಿಕ್ಕೆ ಸಮರ್ಥವಾದ ವಿಶಾಲ ಹೃದಯದ ಹೆಣೆಯೂ ಅವನಿಗೆ ಇನ್ನಿಷ್ಟು ದಂಗುಬಡಿಸಿದವು.

" ಯಾಕರೀಯಪ್ಪಾ ಬಡವೀನ್ನ ಬಾಳ ದಿಟ್ಟಿಸತೀರಿ ? " ಯಾಯಾ ಕೇಳಿದಳು. ಬಾಬೂ ಗಾಬರಿಯಾದನು. ಆದರೂ ಸಾವರಿಸಿಕೊಂಡನು.

" ಜೋಡಕುದರಿ ಹೂಡವರು. ಬಡವರ ? " ಬಾಬೂ ನಗುತ್ತ ಸವಾಲು ಹಾಕಿದನು.

" ಎಲ್ಲಿ ಜೋಡ ಕುದರಿ ಧಣೇರ ? "

" ಮತ್ತ ಆ ಕಿಲಾರೀ ಜೋಡ ಅಂದರ ಒಂದು ಜೋಡ ಕುದರಿ ಇದ್ದಾಂಗ. "

" ಅವ ಹೋಂದ. " ಯಾಯಾ ನಗುತ್ತ ಉತ್ತರಿಸಿದಳು. " ನಮ್ಮ ಚಿಗವ್ವ ಮೂಡಲಗೀ ಸಂತ್ಯಾಗ ಕೊಂಡೀದಾಳು....ಜೋಡೀ ಅಂದರ ಏನರಿ...ನಾಲ್ಕ ತಾಸಿನಾಗ ಎಂಟ ಹರದಾರಿ ನಡದ್ದಾವು. "

" ಏನ ಕೊಟ್ಟರು. "

" ಯಾಂಬಲ್ಲ.....ನಿಮ್ಮ ಮನಸ್ಸಿಗೆ ಪಸಂದ ಬಂದೂರಿ ? "

" ಪಸಂದ ಬಂದರ ಏನ ! "

" ಯಾಕರೀ ಯಪ್ಪಾ....? " ಯಾಯಾ ಆಶ್ಚರ್ಯದಿಂದ ಕೇಳಿದಳು.

" ನಮಗ ಸಿಗಬೇಕಲಾ ? "

" ನಿಮಗ....ನಿಮಗ ಯಾಕರಿ ? "

" ಮನಿಂದ ತೋಟಾ ಮಾಡತೀನಿ. "

" ನೀವ ? "

" ಹೌದ. ಯಾಕ ? ನನಗ ಬಗಿ ಹರಿಯಾಕಿಲ್ಲಾ. "

" ನಿಮಗೇನ ಕಮ್ಮತರಿ...ನಾಲ್ಕವರ್ಷ ಕಲತರ ಮಾಮಲೇತಿ ಮಾಡತೀರಿ. "

"ಕಲಿಯೂದು ಮುಗೀತು-ಇಂಥಾ ಜೋಡಿ ಸಿಕ್ಕ್ಯಾವೇನ ನನಗೂ ?"

" ಸಿಗದ ಏನ ಬಿಡ್ರಿ! ಇವೇನ ಅಂಥಾ ಖಮ್ಮ್ರನ ದನಾ ಅಂತಿರಿ. ಇವ ಅಟ ಜೂಲಾಗೀಲಾ ಹಾಕಿ, ಛಂದಕ್ಕ ನಾಲ್ಕೆಂಟ ಮೈಲು ಹಗರ ಬಂಡೀ ಹೊಡಿಯಾಕ ಅಟ ಈ ನಟ್ಟಿಗೆ, ಮಟ್ಟಿಗೆ ಗಾಣಕ ಹಾಕಿ ರುಮ್ಮ್ಯದರ ಇದರ ಡುಬ್ಬ ಕಡಿಯಾಕ ಆಗದಿದ್ದರ ನನ್ನ ಹೆಸರಗೊಂಡ ಕರಿಬ್ಯಾಡರಿ..... ಯಾಕ ಚನ್ನಾ....ಬಾವೀಕಡದ ನೀರ ತಂದೇನು ? "

" ನಾನೂ ಇದ ಬಂದಿನ್ನಿ....ಅದಕ್ಕ ಒಂದು ಕೊಡ ನೀರ ಬಾವ್ಯಾಗಿಂದ ಹೊತ್ತ ತಂದಿನಿ....ತೊಕೋ..... "

ಯಾಯಾ ನೀರು ಕುಡಿದಳು. ಹೊರಡಲನುವಾದಳು.

" ಚನ್ನಾ ನಿನ್ನ ಸವತಿ ಬಂದಳಲಾ ? " ಯಾಯಾ ನಗುತ್ತ ಅಂದಳು.

" ಏನಾ ? " ಚನ್ನ ತಿಳಿಯದೆ ಅಂದನು.

" ಧಣೇರ ನಿನ್ನ ಗಂಟಲಕ್ಕ ಗಾಣ ಆಗೀದಾರಲಾ... " ಯಾಯಾ ಕಿಡಗೇಡಿತನದಿಂದ ನಗುತ್ತ ಅಂದಳು. " ದಣೇರ ಜೋಕೆ ಹಾ ! ಚನ್ನನ ಕೂಡ ಕುಸ್ತಿ ಅಂದರ ಯಾವಾಗಲೂ ಇಜ್ಜೋಡೇ. "

" ಅವರ ತೋಟದಾಗ ನಂದೇನಾ ಕಸರತ ಐತಿ ಬಿಡ " ಚನ್ನವೀರ ಔಪಚಾರಿಕವಾಗಿ ನುಡಿದನು. ಯಾಯಾ ಹೋದಳು.

---

—ಬಾಸಿಂಗಬಲ

" ಯಾರ ಇಕಿ ? " ಬಾಬೂ ಕೇಳಿದನು ಚನ್ನವೀರನನ್ನು.

" ದಾಸಪ್ಪನ ರಂಡೀಮಗಳು. "

" ಇಲ್ಲೆ ಯಾರ ಇದ್ದಾರ ಇಕೀ ಪೈಕಿ ? "

" ಇಕೀ ಚಿಗವ್ವ ಅದಾಳು. ಮೊನ್ನೆ ಮುದುಕಿ ದವ್ಮನಿಂದ ಸತ್ತ ಸತ್ತ ಉಳದಳು. ನೋಡಾಕ ಬಂದಿರಬೇಕು. "

ಇಬ್ಬರೂ ಗಾಡಿಹೋದ ಕಡೆಗೆ ನೋಡಿದರು. ಆ ನಿಟ್ಟಿಗೆ ದೂಲಿಯ ಮೋಡವು ಹಾದಿಯನ್ನು ಸುತ್ತಿ ಸುತ್ತಿ ಬೇಲಿಗಳನ್ನು ನುಗ್ಗಿ ಹೊರಕ್ಕೆ ಹೋಗುತ್ತಿತ್ತು.

" ಚನ್ನಾ....ಎತಗೋಳ ಏನ ಭರಾಟಿ ನಡದಾವಪಾ. "

" ಧೂಳಿಲ್ರಿ !....ಅದ ಕುರೀದರಿ. "

" ಕುರೀದು ? "

" ಹೌಂದರಿ. ಶಿವನ್ಯಾ ಅಡವಿಗೆ ಹೊಂಟಾನು. "

" ಅಂದರ ನೀ ಧಂಥೇ ಅರೆ ಎಷ್ಟು ಮಾಡತೀ ? "

" ಯಪ್ಪಾ ಹೊಟ್ಟೆ ತುಂಬಾಕರೇ ಬ್ಯಾಡರಿ....ನಾ ದನಾ ಕರಾ, ಎಮ್ಮಿ ನೋಡತೀನಿ. ನನ್ನ ಹೆಂಡತಿ ಆಡು ಕೋಳಿ ಸಾಕತಾಳು....ಶಿವನ್ಯಾನ ಪಾಲಿಗಿ ಕುರಿ ಬಂದಾವು; ಈಟ ಮಾಡಿ ಕಡಿಯಾಕೂ ನಾಲ್ಕದಿನ ವರಸದಾಗ ಉಪವಾಸ ಬೀಳಬೇಕಾಗತತಿ. "

" ಯಾಯಾ ಹೇಳಿದಾಂಗ ನೀ ಬೆರಕಿ ಇದ್ದಿ ತೊಗೋ " ಬಾಬೂ ಅಂದನು. " ನೀ ಕಡೆತನಕಾ ನರಳಿ ನರಳಿ ಉಳಕೋಳಾವ ನೋಡ..... ಅಷ್ಟ ಹಾಲು ಕಳಿಸಿಕೊಡು. ವರ್ತನಿ ಸಿಗೋತನಕಾ.... "

" ಬರ್ತ ಹೇಣತಿಗೆ ಹೇಳಿಬಂದೀನ್ರಿ ಈಗಳೆ...ನಿಮ್ಮನೀಗೆ ಅಕಿ ಈಗ ಹೋಗಿ ಬಂದಿರಬೇಕರಿ.....ಹೋಗತ ಅಟ ಒದರರಿ.....ತರತಾಳು.... "

" ಅಂತೂ ಧೋರಣೀ ಮನಸ್ಯಾ ಅದೀನೀ ! " ಬಾಬೂ ಅಂದ. ಚನ್ನವೀರ ಮಾತನಾಡಲಿಲ್ಲ. ಕುಸು ನಕ್ಕನು ಮಾತ್ರ.

---

## ೩. ಕಾಮವಾಸನೆ.          *     *     *

ಬಾಬೂ ಗೋಸಬಾಳಕ್ಕೆ ಬಂದು ನಾಲ್ಕು ತಿಂಗಳಾಗುತ್ತ ಬಂದಿತು. ಅವನ ಯೋಜನೆಗಳೆಲ್ಲವೂ ಪೂರ್ತಿಯಾಗಿವೆ. ಬಾವಿಗೊಂದು 'ಹೊಸ ಮೊಟ್ಟೆಯಾಗಿದೆ, ಬಾರಿಯಾಗಿದೆ. ಒಂದು ಜೋಡೆತ್ತು ಖರೀದಿಯಾಗಿದೆ. ಚನ್ನವೀರನ ಕಣಿಕೆಯೆಲ್ಲ ಅವನ ಮನೆಗೆ ಸಾಗಿ ಅಲ್ಲಿ ಬಾಬೂನ ದನಗಳಿಗೆ ಮೇವು ಮಿಡಚಿಗಳು ಸಂಗ್ರಹವಾಗಿವೆ. ಮಿಣಿ, ಉಕ್ಕಡ, ಜತಿಗೆ, ಹಗ್ಗ, ಬಾರಕೋಲು, ಮುಂತಾದ ದನಗಳ ಸಾಹಿತ್ಯವೆಲ್ಲವೂ ಸಿದ್ಧವಾಗಿವೆ. ಇದರ ಜೊತೆಗೆ ಅವನ ಜೀವನಕ್ರಮವೂ ಒಂದು ಸ್ತ್ರಿಮಿತಕ್ಕೆ ಬಂದಿದೆ. ದಿನದ ವ್ಯಾಪಾರದಲ್ಲಿ ಒಂದೆರಡು ಅಪ್ರಾಸಂಗಿಕವಾದ ಘಟನೆಗಳು ಆಕಸ್ಮಿಕವಾಗಿ ಘಟಿಸಿದ ವಿನಹ ಆದರ ನಿಬದ್ಧಸೂತ್ರತೆಯಲ್ಲಿ ಯಾಂತ್ರಿಕ ಕ್ರಮವು ರೂಪಗೊಳ್ಳುತ್ತಲಿದೆ. ಅವನ ಮಾನಸಿಕ ವ್ಯಾಪಾರಗಳು ಕ್ರಮೇಣ ಕುಗ್ಗುತ್ತಲಿವೆ. ಅವನ ಪ್ರತಿಭಾಸಾಧನವು ಸಾಮಾಗ್ರಿ ಇಲ್ಲದಂತಾಗಹತ್ತಿದೆ. ಇದರ ವಿರುದ್ಧವಾಗಿ ಅವನ ಬಡಕಲು ದೇಹವು ಪುಷ್ಟವಾಗಹತ್ತಿದೆ. ಅಂಗಾಂಗಗಳಲ್ಲಿ ಚೈತನ್ಯ ತುಂಬಿ ಮಾಂಸವೆತ್ತಿ ಸರಲ ರೇಷೆಗಳು ವಕ್ರೀಭವನಗೊಳ್ಳುತ್ತಿವೆ. ಅಂಗಕಾಂತಿಯು ನಸುಗಪ್ಪು ವರ್ಣಕ್ಕಿಳಿಯಹತ್ತಿದರೂ, ಆದರಲ್ಲಿ ಮೆರುಗು, ಹೊಳಪು, ಎಣ್ಣೆಕೊಬ್ಬು ಸ್ನಿಗ್ಧವಾಗುತ್ತವೆ. ಕೂದಲು ಕಪ್ಪೇರಹತ್ತಿವೆ. ಇಲ್ಲವ ತಾಣದಲ್ಲಿ ಸವಿರು ಬೇರು ಬಿಡುತ್ತಲಿದೆ. ಮುಖದ ಕಾಂತಿಯು ಕಮನೀಯ ಆಕಾರವನ್ನು ತಳೆಯಹತ್ತಿದೆ. ಬಾಬೂ ನವತಾರುಣ್ಯದ ಅಂಗಸೌಷ್ಟವವನ್ನೂ, ಸುವಾಸವನ್ನೂ ಬೆಳಗಹತ್ತಿದ್ದಾನೆ.

ಬಾಬೂನ ವೇಷದಲ್ಲಿಯೂ ಮಾರ್ಪಾಡುಗಳಾಗಿವೆ. ಅವನು ಈಗ ನೇಹರೂ ಅಂಗಿಯನ್ನು ತೊಡುತ್ತಾನೆ. ತಲೆಗೊಂದು ರುಮಾಲು ಸುತ್ತುವನು. ದೋತರವಂತೂ ಸರಿಯೇ ಸರಿ.

ಆದರೆ ಪರಿಪೂರ್ಣವಾಗುತ್ತಿರುವ ಬಾಬೂನ ಜೀವನದಲ್ಲಿ ಒಂದು ಅಂಶವು ಮಾತ್ರ ತಲೆಕೆಡಿಸುತ್ತಲೇ ಆದೆ. ಕೆಲವೊಂದು ಸಲ ದೀರ್ಘಕ್ಕೆ

ಇಳಿದು ಅವನನ್ನು ಉಪವಾಸ ಕೆಡವುತ್ತಲಿದೆ. ಅವನಿಗೆ ಅಡಿಗೆ ಬರಲಿಲ್ಲ ವೆಂತಲ್ಲ. ಆದರೆ ಮನವಮೂಳೆ ಮುರಿಯುವ ಕೆಲಸ ಮಾಡಿ ಮನೆಗೆ ಬಂದು ಕುಚ್ಚುವದು ಅವನಿಗೆ ಅಸಾಧ್ಯವಾಗಿದೆ. ಈಗ ಅವನಿಗೆ ತಾಯಿ, ತಂಗಿ, ಪ್ರೇಯಸಿಯ ನೆನಪಾಗಿದೆ. ಆದರೆ ಧ್ಯೇಯವಾದಿಗೆ ಹಿಂದೆ ನೋಡುವ ಅಭಿ ಮಾನವೆಲ್ಲಿ ಬರಬೇಕು ?

ಎಂದಿನಂತೆ ಬಾಬೂ ಎತ್ತುಗಳನ್ನು ತಿರುವಿಕೊಂಡು ತೋಟಕ್ಕೆ ಹೊರಟನು. ಚನ್ನವೀರನು ಆದೇ ಬಂದಿದ್ದನು. ಜೊತೆಗೆ ಒಂದೆರಡು ಆಳನ್ನೂ ತಂದಿದ್ದನು ಯಾಯಾ ಅವರಲ್ಲಿ ಒಬ್ಬಳು. ತೋಟದಲ್ಲಿ ಬದನೆ ಬೆಳೆದು ನಿಂತಿತ್ತು. ಸವತಿ ಹೂಬಿಟ್ಟಿತ್ತು. ಕಬ್ಬು ರಸ ತುಂಬತ್ತಲಿತ್ತು. ಒಂದು ಬಿಗಿ ಮೆಣಸು ಹಾಕಬೇಕಾಗಿತ್ತು. ಸಸಿಗಳೆಲ್ಲವೂ ಸಿದ್ಧವಾಗಿದ್ದವು ಮಡಿಮಾಡಿ ಕಾಲಿವೆ ಬಿಟ್ಟು ಅವನ್ನು ನೆಡುವದೊಂದು ಉಳಿದಿತ್ತು. ಯಾಯಾ ಮತ್ತು ಅವಳ ಜೊತೆಗೆ ಬಂದವಳು ಕೆಲಸಕ್ಕೆ ತೊಡಗಿದರು. ಚನ್ನವೀರ ಅವರ ಮೇಲ್ವಿಚಾರ ಮಾಡ ಹತ್ತಿದನು. ಬಾಬೂ ಜತಿಗೆಗೆ ಎತ್ತುಗಳನ್ನು ಬಿಗಿದು ಮೊಟ್ಟೆ ಆರಂಭಿಸಿದನು.

ನೆಡುವ ಕೆಲಸವು ಅವಿಚ್ಛಿನ್ನವಾಗಿ ಎರಡು ತಾಸುಗಳ ವರೆಗೆ ನಡೆ ಯಿತು. ಬಾಬೂ ಅಲ್ಲಿಯವರೆಗೆ ವಿಸುಕದೆ ಮೊಟ್ಟೆ ಹೊಡೆದನು. ನೆಡುವದು ಮುಗಿವ ಹೊತ್ತಿಗೆ ಪಾರ್ವತಿ—ಚನ್ನವೀರನ ಹೆಂಡತಿ—ಬಂದಳು. ನೀರು ಬಿಡುವ ಕೆಲಸವನ್ನು ಆ ಮೂವರಿಗೆ ಒಪ್ಪಿಸಿ ಚನ್ನವೀರನೂ ಮೊಟ್ಟೆಗೆ ಅಣಿಯಾದನು ಜೋಡು ಮೊಟ್ಟೆಯು, ಅವ್ಯಾಹತವಾಗಿ ನಡೆದು ಮಧ್ಯಾ ಹ್ನದ ಹೊತ್ತಿಗೆ ನಿಲ್ಲಿಸಿದರು. ಚನ್ನವೀರನು ಎತ್ತುಗಳನ್ನು ಚಪ್ಪರಕ್ಕೆ ಸಾಗಿಸಿದನು ಆಳುಗಳು ಪಾರ್ವತಿ ಚನ್ನವೀರರೂ ಊಟಕ್ಕೆ ಸಿದ್ಧರಾದರು. ಬಾಬೂ ತಲೆಗೆ ರುಮಾಲು ಸುತ್ತಿ ಮನೆಗೆ ಹೊರಡಲನುವಾದನು.

“ ಇನ್ನ ಹೋದವ್ಯಾಲೆ ಅಡಿಗಿ ಏನ್ರಿ ?” ಯಾಯಾ ವಿಚಾರಿಸಿದಳು.

“ ಹೂಂ. ” ಬಾಬೂ ಖಿನ್ನನಾಗಿ ಗಂಡಸ್ಥಲದಿಂದ ಹನಿಹನಿಯಾಗಿ ಉದುರುತ್ತಿರುವ ಬೆವರು ಹನಿಗಳನ್ನು ದೋತರದ ಚುಂಗದಿಂದ ಒರಸುತ್ತ ಅಂದನು.

" ಒಂದ ಈಟ ನಿಲ್ಲರಿ. "

" ಯಾಕ ? " ಬಾಬೂ ಬಾರಿಯ ಕಲ್ಲ ಮೇಲೆ ಕೂಡುತ್ತ ಕೇಳಿದನು.

ಯಾಯಾ ಮಾತನಾಡಲಿಲ್ಲ. ಒಂದು ಬಾಳೆಯ ಫಡಕಿನಲ್ಲಿ ಒಂದೆರಡು ದೊಡ್ಡ ಕರದಂಟನ್ನು ಹಾಕಿ ಅವನ ಎದುರಿಗಿಡುತ್ತ ಅಂದಳು.

" ಇದಟ ತಿಂದು ನೀರು ಕುಡದರ ಸಂಜೀಮಟ ಅಡಿಗಾದರೂ ನಡದೀತು."

" ಛೇ ! ಛೇ !! ಇದೆಲ್ಲ ಬ್ಯಾಡ ! " ಬಾಬೂ ಏಳುತ್ತ ಅಂದನು.

" ಅದೇನ ಮುಸರಿ ಅಲ್ಲಾ ಮುರಲಿ ಅಲ್ಲಾ ತೊಕೋರಿ." ಹೆಣ್ಣಾಳು ಅಂದಳು.

" ಒಂದ ಅಟ ನೀರಿಗೆ ಆಧಾರ ತೊಕೋರಿ. " ಪಾರ್ವತಿ ಅಂದಳು

" ಅದಕ್ಕೇನಾಗತೈತಿ ಹೊಡೀರಿ. " ಚನ್ನವೀರ ನುಡಿದನು.

ಈ ತ್ರಿಜನ ಸಮರ್ಥನೆಯಿಂದ ಧೈರ್ಯಗೊಂಡ ಯಾಯಾ ಮುಂದು ವರಿದಳು.

" ಚಿಕ್ಕಪ್ಪ ಅಮೀನಗಡದಿಂದ ಬರತ ಒಂದ ಧಡಿ ಕರದಂಟ ತಂದ ಗೋಸಬಾಳಪ್ಪಗ ಪರಸಾದ ಮಾಡ್ಯಾನ್ರಿ. ದೇವರ ಪರಸಾದ ಒಲ್ಲೆಂತನ ಬಾಡ್ರಿ ತೊಕೋರಿ. "

" ಗೋಸಬಾಳಪ್ಪನ ಪ್ರಸಾದ ! " ಬಾಬು ನಗುತ್ತ ಅಂದನು. " ಹನುಮಪ್ಪ ಉಗ್ರ ಇದ್ದಾನ. ಪ್ರಸಾದ ಬಿಟ್ಟರ ಕೇಳ್ಯಾನ ? ಇಡ ಹಾಗಾದರ....ಎಲ್ಲೆ ನೀವೂ ಊಟಕ್ಕ ಕೂಡ್ರೆಲಾ ! "

ಎಲ್ಲರೂ ಬೇವಿನ ನೆಳಲಿನ ಆಶ್ರಯದಲ್ಲಿ ಸಾಲಾಗಿ ಕುಳಿತರು. ಕೈಯಲ್ಲಿ ಜೋಡಿಸಿ ಬಕ್ಕರೆಯನ್ನು ಹಿಡಿದರು.

" ಹೊಂ ಸುರು ಮಾಡರಿ...ಯಾಕೋ ಚನ್ನ. "

" ಪಾರಿ ಎಷ್ಟ ಗಡ್ಡೀತರಾಕ ಹೋಗ್ಯಾಳ್ರಿ. ನೀವು ಕೂಡರಿ. "

ಪಾರ್ವತಿಯು ಎರಡೆರಡು ಗಡ್ಡೆಗಳನ್ನು ಎಲ್ಲರ ಕೈಯಲ್ಲಿರಿಸಿದಳು. ಎಲ್ಲರೂ ಊಟಕ್ಕೆ ಕುಳಿತರು. ಬಾಬೂ ಕರದಂಟನ್ನು ತಿಂದು ನೀರು ಕುಡಿ

ದನು. ಅವನಿಗೆ ಅರೆಹೊಟ್ಟೆ ತುಂಬಿದಂತಾಯಿತು. ಕಾತರ ದೃಷ್ಟಿಯಿಂದ ಯಾಯಾನ ಕಡೆಗೆ ನೋಡಿದನು.

" ಒಂದೆರಡ ರೊಟ್ಟಿ ಕೊಡಲೇನ್ರಿ ? ಧಣೇರ ? " ಯಾಯಾ ಅವನ ಅರ್ಥವನ್ನು ತಿಳಿದಂತೆ ಕೇಳಿದಳು.

" ನಿನ್ನ ಕೈರೊಟ್ಟಿ ತಿನ್ನಸಿ ಜಾತೀ ಕೆಡಸತೀಯಾ ? "

" ನಾಯಾಕ ಕೆಡಸಲರಿ ! " ಯಾಯಾ ನಗುತ್ತ ಅಂದಳು. " ಫರಾಳ ಅಂಗಡಿಯುವರು ಕೆಡಸತಾರು. "

" ತಾ ಹಾಗಾದರ. ಪ್ರೀತಿಯಿಂದ ಕೊಡತೀ ಅಂದ ಮ್ಯಾಲ ನಿನಗೂ ಅಸಮಾಧಾನ ಯಾಕ ಮಾಡಬೇಕು. "

" ನೋಡ್ರಿ ಧಣೇರ ಮತ್ತ ! " ಯಾಯಾ ಬಿಗಿಹಿಡಿದಳು.

" ಇಲ್ಲಿ ನೋಡು ! " ಬಾಬೂ ವಿವರಿಸಿದನು. " ಒಕ್ಕಲತನ ಬ್ರಾಹ್ಮಣರ ಧಂದೆ ಅಲ್ಲ ಅವರು ದೇವರುದಿಂಡರು, ಪೂಜೆ ಪುಣ್ಯ ಕಥೆಯಲ್ಲಿ ಇರಬೇಕು. ಅದನ್ನ ಬಿಟ್ಟು ಒಕ್ಕಲತನ ಆರಂಭಿಸಿದರ ಬ್ರಾಹ್ಮಣಿಕೆ ಕರ್ಮ ಹ್ಯಾಗ ಉಳೀತದ...ತಾ." ಕೈ ಮುಂದೆ ಮಾಡಿದನು.

ಯಾಯಾ ಮೂರು ರೊಟ್ಟಿಗಳನ್ನು ಕಾರಬೇಳೆಯನ್ನು ಒಂದೆರಡು ಉರುಳೇಗಡ್ಡೆಗಳನ್ನು ತಕ್ಕೊಂಡು ಅವನ ಎಲೆಯ ಮೇಲೆ ಇರಿಸಿದಳು. ಬಾಬೂ ತಿನ್ನಹತ್ತಿದನು. ಅವನಿಗೆ ಕಾರಬೇಳೆಯ ರುಚಿಯಂತೂ ಅಮೃತವಾಯಿತು.

" ಕಾರಬೇಳೆ ಯಾರದು ? "

" ಪಾರೋತಿ ಕ್ಯರಿ. " ಯಾಯಾ ಅಂದಳು.

" ನಿನ್ನ ಹೆಂಡತೀ ಕೈನೂ ಬಲಾನೋ ಚನ್ನಾ. " ಬಾಬೂ ನಗೆಯಾಡಿದನು.

" ಇದೊಂದ ದಿನಾ ಚಲೊ ಮಾಡ್ಯಾಳ ನೋಡ್ರಿ." ಚನ್ನ ಒಪ್ಪಿದನು.

" ನಮ್ಮ ಧ್ಯಾತರ ಅಡಿಗೆ ತೊಗೋರಿ. " ಪಾರ್ವತಿ ಅಂದಳು. " ಹಾರೂರ ಅಡಿಗೀ ರುಚಿ ನಮಗ ಹ್ಯಾಂಗ ಬಂದೋತರಿ. "

" ಇಕಾ ಈ ಭಕ್ಕರಿ. " ಬಾಬೂ ಭಕ್ಕರಿ ಮುರಿಯುತ್ತ ಅಂದನು. " ಎರಡು ದುಂಡಗಿನ ಹಾಳಿ ಕತ್ತರಿಸಿ ದಂಡಿಗೆ ಅಂಟ ಹಚ್ಚಿಧಾಂಗ ಆಗೇದ.... ಹೀಂಗ ಭಕ್ಕರಿ ನಮ್ಮ್ಯಾದಿಗೆ ಬರತಾಣ ?... ಭಕ್ಕರಿ ಯಾರದು ? "

" ಯಾಯಾಂದರಿ ! " ಈ ಸಲ ಪಾರ್ವತಿಯು ಹೇಳಿದಳು.

ಯಾಯಾ ಉಬ್ಬಿ ಹೋದಳು. ತನ್ನ ವಾಹವ್ವಾದಕಿಂತಲೂ ತನ್ನ ಕೈಯಿಂದ ಮಾಡಿದ ಬಕ್ಕರಿಯನ್ನು ಬಾಬೂ ತಿಂದುದಕ್ಕಾಗಿ ಅವಳಿಗೆ ಅತ್ಯಾನಂದವಾಗಿತ್ತು.

ಎಲ್ಲರೂ ಕೈತೊಳೆದರು. ಚನ್ನವೀರ ಬತ್ತಿಸೇದಲು ಇನ್ನೊಂದು ಗಿಡದಡಿಗೆ ಹೋದನು. ಯಾಯಾ ಇದ್ದ ಮುಸರಿಮುರಲಿಯನ್ನು ಉಡುಗಿ ಒಂದು ಗೊಂಗಡಿಯನ್ನು ಹಾಸಿದಳು. ಬಾಬೂ ಅದರ ಮೇಲೆ ಒರಗಿದನು. ಮದವೇರುವಂತೆ ಹೊಟ್ಟೆತುಂಬ ಊಟ, ಬೇವಿನ ತಂಪು ನೆಳಲು, ವ್ಯೈಮನಗಳನ್ನು ಪ್ರಶಾಂತಗೊಳಿಸುವ ಸುಗಂಧಮಯ ಸಮೀರಣನ ಸುಳಿದಾಟ, ಬಳಲಿದ ದೇಹ, ಎಲ್ಲವೂ ಕಟ್ಟುವೊಡೆದು ಕನಸಿನ ಸಾಮ್ರಾಜ್ಯಕ್ಕೆ ಎಳೆಯ ಹತ್ತಿದವು. ಬಾಬೂನಿಗೆ ಗಾಢವಾದ ನಿದ್ದೆ ಹತ್ತಿತು.

ಅವನಿಗೆ ಎಚ್ಚರಾದಾಗ ಇಳಿಹೊತ್ತಾಗಿತ್ತು. ಅವನು ಗಡಿಬಿಡಿಸಿಕೊಂಡು ಎದ್ದನು. ಬದಿಯಲ್ಲಿದ್ದ ಮಣ್ಣುಕೊಡದೊಳಗಿನ ತಣ್ಣೀರಿನಿಂದ ಮುಖಮಾರ್ಜನ ಮಾಡಿಕೊಂಡನು. ಸುತ್ತಲೂ ನೋಡಿದನು. ಯಾರೂ ಇರಲಿಲ್ಲ. ತನ್ನನ್ನು ಎಲ್ಲರೂ ತ್ಯಜಿಸಿ ಹೋದುದಕ್ಕಾಗಿ ಅವನಿಗೆ ಕೆಡಕೆನಿಸಿತು. ಅವನ ಮನಸ್ಸು ಶುಷ್ಕವಾಯಿತು. ತನಗೆ ಅವರು ಅವಮಾನ ಮಾಡಿದರೆಂದು ಅಭಿಪ್ರಾಯವಲ್ಲ. ಆದರೆ ತಾನು ಏಳುವಾಗ ಯಾರಾದರೂ ಇರಬೇಕಿತ್ತು ಎಂಬ ಭಾವನೆ ಮಾತ್ರ ಅವನ ಚಿತ್ತದಿಂದ ಬೇರ್ಪಡಲಿಲ್ಲ. ಅವನ ಮನಸ್ಸು ಯಾರೋ ಎದುರಿಗೆ ಇರಬೇಕಿತ್ತು ಎಂದು ಚಿಂತಿಸುತ್ತಿತ್ತು. ಆದರೆ ಇಂಥ ನಿರ್ದಿಷ್ಟವ್ಯಕ್ತಿಯೇ ಬೇಕಾಗಿತ್ತೆಂದು ಹೇಳಲು ಅವನಿಗೂ ಸಾಧ್ಯವಿದ್ದಿದ್ದಿಲ್ಲ.

ಅವನು ಸಾವರಿಸಿಕೊಂಡು ಎದ್ದುನಿಂತನು. ತೋಟದ ಒಂದು ಸುತ್ತುವರೆದು ಬರಬೇಕೆಂದು ಮನಸ್ಸಾಯಿತು. ಮಡಿಗಳ ಮಗ್ಗುಲಾಗಿ

ಒಂದು ಓರಿಗೆ ಬಂದನು. ಒಂದು ಫಲದ್ರೂಪವಾದ ಮಾವಿನ ಗಿಡ. ಕಾಯಿ ತುಂಬಿ ತುಳುಕುತ್ತಲಿದೆ. ಆದರ ನೆರಳಿಗೆ ನಿಂತಾಗ ಗಿಡದಲ್ಲಿಯ ಕೆಲಕಾಯಿ ಗಳನ್ನು ಕೆಡವಿದಂತೆ ಅವನಿಗೆ ತೋರಿತು. ಬೆಳಗಿನ ಜಾವದಲ್ಲಿ ಒಂದು ಪ್ರಸಂಗಕ್ಕಾಗಿ ಇಲ್ಲಿಗೆ ಬಂದಿದ್ದ. ಆಗಿದ್ದ ಕಾಯಿಗಳ ಮಾನಕ್ಕಿಂತಲೂ ಈಗ ಕಡಮೆ ಇದ್ದವು. ಕೆಳಗೆ ನಾಲ್ಕೆಂಟು ಮಾವಿನ ಎಲೆಗಳು ಬಿದ್ದಿದ್ದವು. ಒಂದು ಎಲೆಯ ಹತ್ತಿರ ಒಂದು ಕಾಯಿಯು ಮರೆಯಾಗಿ ಬಿದ್ದಿತ್ತು. ಬಾಬೂ ಅದನ್ನು ಎತ್ತಿಕೊಂಡು ನಿರೀಕ್ಷಿಸಿದನು. ಅದಕ್ಕೆ ಕಲ್ಲಿನ ಪೆಟ್ಟು ಇರಲಿಲ್ಲ. ಸೋರಿದ ರಸವು ಮಣ್ಣಿನಿಂದ ಒಡಗೂಡಿ ಮೂಗಿಗೆ ಮೆತ್ತಿತ್ತು. ಇದು ಹರಿದಕಾಯಿ, ಕೆಡವಿದ ಕಾಯಿಯಲ್ಲವೆಂದು ನಿರ್ಧಾರವಾಯಿತು. ಅದನ್ನ ವನು ಜೇಬಿನಲ್ಲಿ ಸೇರಿಸಿದನು.

ಅಲ್ಲಿಂದ ಅವನು ಬದನೇಬನಕ್ಕೆ ಬಂದನು. ಬೆಳಗಿನ ಜಾವದಲ್ಲಿ ಕಾಲುವೆಯ ಹತ್ತಿರದ ಮಡಿಯಲ್ಲಿ ಅವನು ಸಹಜವಾಗಿ ನೋಡಿದ್ದನು ಅಲ್ಲಿ ಒಟ್ಟು ಹರಿಯಬರಬಹುದಾದ ಇಪ್ಪತ್ತು ಕಾಯಿಗಳಿದ್ದವು. ಈಗ ನೋಡ ಲಾಗಿ ಅಲ್ಲಿ ಸಣ್ಣ ಸಣ್ಣ ಒಂದು ಹತ್ತು ಹನ್ನೆರಡು ಕಾಯಿಗಳನ್ನು ನೋಡಿ ದನು. ಕಾಯಿಗಳನ್ನು ಹರಿದುದು ನಿರ್ವಿವಾದವಾಗಿತ್ತು. ಬಾಬೂ ಆಶೆ ಯಿಂದ ಛಪ್ಪರದ ಹತ್ತಿರ ಬಂದನು. ಅವನ ಎತ್ತುಗಳು ಯಾವ ಸಂಶಯ ವಿಲ್ಲದೆ ಮೆಲಕಾಡಿಸುತ್ತಿದ್ದವು. ಕಣಿಕೆಯ ಒಂದು ಬದಿಗೆ ಒಂದು ಬುಟ್ಟಿಯ ಅಂಚು ಕಾಣುತ್ತಿತ್ತು. ಬಾಬೂ ತಡವರಿಸಿ ಅಲ್ಲಿ ಹೋಗಿ ನೋಡಿದನು. ಬುಟ್ಟಿತುಂಬ ಬದನೆ ಮತ್ತು ಹಸಿಮಾವಿನಕಾಯಿಗಳಿದ್ದವು. ಅವನ ಸಂಶಯವು ದೃಢವಾಯಿತು. ಅವನು ಹೊರಕ್ಕೆ ಬಂದನು. ಬಾರಿ ಯಮೇಲೆ ಕುಳಿತು ವಿಚಾರಿಸಹತ್ತಿದನು.

ಅಷ್ಟುಹೊತ್ತಿಗೆ ಚನ್ನವೀರನು ಬಂದನು. ಜೊತೆಗೆ ಅವನ ಹೆಂಡ ತಿಯು ಬಂದಿದ್ದಳು. ಚನ್ನವೀರನು ಬಾರಿಯ ಹತ್ತಿರ ಬಂದನು.

" ಧಣೇರ ಪಸಂದ ನಿದ್ದೆ ಹತ್ತಿರಬೇಕರಿ. " ಎಂದನು.

" ಹೌದೋ ಚನ್ನಾ ....ಈಗ ಎದ್ದೆ....ಇನ್ನೊಂದು ಸರವು ಮೊಟ್ಟೆ ಹೊಡೆಯೋಣ! "

“ ಐ ! ಇಂದ ಹೊಡದ ಮೊಟ್ಟಿ ಇನ್ನ ನಾಲ್ಕದಿನಾ ಆಕ್ಕತಿ! ” ಪಾರ್ವತಿ ಅಂದಳು.

“ ನನ್ನ ಮೊಟ್ಟಿಗೆ ಧಣೇರ ಮೂರು ಮೊಟ್ಟಿ ಬೀಳುತ್ತಿದ್ದು ಪಾರಿ! ” ಚನ್ನ ನುಡಿದನು.

“ ಐ ನಿನ್ನ ವಯಸ್ಸ ಅವರ ಹರೇಕ ಹೋಲಸತೀ ಏನ? ” ಪಾರ್ವತಿ ಅಣಕಿದಳು.

“ ಮತ್ತ ದನಾ ಹ್ಯಾಂಗದಾವು....ಆನೆ ಆಗಿದಾವು. ”

“ ಚನ್ನಾ...” ಬಾಬೂ ಅಂದನು. “ ಬದನಿ, ಸವತಿ ಮತ್ತು ಕಬ್ಬು ಬಲೀಲಿಕ್ಕೆ ಹತ್ತೇದ. ಇನ್ನಕಾವಲು ಬೇಕು.......ಏನಂತೀ? ”

“ ಮತ್ತ ರಾತ್ರಿ ನಾ ಇಲ್ಲೇ ಬೀಳತೀನಲಾ........ಮುಂಜಾನೆಯಿಂದ ಸಂಜೀಮಟ ಒಬ್ಬರಿಲ್ಲೊಬ್ಬರು ಇದ್ದ ಇರತಾರು.......ಇದಕೂ ಮೀರಿ ಇಡಂದರ ಇಡೂಣು....ಯಾಯಾ ಖಾಲೀನ ಅದಾಳು....”

“ ಖಾಲೀ ಇದ್ದಾಳ? ” ಬಾಬು ಅನೀರ್ವಚನಿಯವಾದ ಒಂದು ಆತ್ಮೀಯತೆಯಿಂದ ನುಡಿದನು. “ ಹಾಗಾದರೆ ಆಕೆಗೆ ಹೇಳಿಬೀಡು ನಾಳಿನಿಂದ ಕಾವಲಕ್ಕ....ಚನ್ನಾ...ಏನಾರೆ ಬದನೀ ಹರದೀದಿ ಏನ...ಸಂಜೆಗೆ ಪಲ್ಲೇಕ ಬೇಕಾಗಿತ್ತು. ”

“ ಇಲ್ರಿ...ಬೇಕಾದ್ರ ಹರದ ಕೊಡತೀನರಿ.......ಹರಿಲೇನ್ರಿ? ”

“ ಇನ್ನೇನ ಬ್ಯಾಡ. ಹೊತ್ತು ಮುಳುಗಿತು....ನಾಳೆ ನೋಡಿದರಾಯಿತು.....ಮತ್ತ ಇಲ್ಲೆನೋಡು.......ರಾತ್ರಿ ಮಲಗಲಿಕ್ಕೆ ಇಲ್ಲೇಬಂದಬಿಡತೀನಿ....ನಿನಗೂ ಜೋಡ ಆಗತದ. ಅಲ್ಲೆರೆ ಒಬ್ಬನ ಮಲಗಿ ಏನ ಮಾಡಲಿ....ಮತ್ತ ಇಲ್ಲಿ ನೋಡು ದನಾನೂ ಇಲ್ಲೇ ಇರಲಿ....”

“ ಹೂನ್ರಿ. ” ಚನ್ನವೀರನು ನುಡಿದನು.

“ ಮತ್ತ ಬರಾಗ ಆಟ ಹೊತಗೋಳಾಕ ಗಟ್ಟಿಮುಟ್ಟಿ ತರ್ರಿ.... ಹರೀವೊತ್ತಿನಾಗ ತಂಡಿ ಬೀಳತತಿ! ” ಪಾರ್ವತಿ ಎಚ್ಚರಿಸಿದಳು.

---

— ಬಾಸಿಂಗಬಲ

"ಹೂ!" ಬಾಬೂ ಉತ್ತರಿಸಿದನು.

ಅವನು ತೋಟವನ್ನು ದಾಟಿ ಹೊರಗೆ ಹೋದನು. ಅವನ ಮನಸ್ಸಿನಲ್ಲಿ ಒಂದು ವಿಚಾರ ಕಟೆಯುತ್ತಿತ್ತು. ಆದುದರಿಂದ ಅವನಿಗೆ ಮನೆಗೆ ಹೋಗುವ ಮನಸ್ಸಾಗಲಿಲ್ಲ. ಒಂದು ಅಡಗುವ ಸ್ಥಳವು ಅವನಿಗೆ ಅವಶ್ಯವಾಗಿತ್ತು. ಆದರೆ ದಾರಿಯ ಎರಡು ಬದಿಗೂ ಅದಾವುದೂ ಒಂದು ಕಂಟಿ ಕೂಡ ದೊರಕಲಿಲ್ಲ. ಇದೂ ಅಲ್ಲದೆ ಅರೆಮರೆಯಾಗುತ್ತಿರುವ ಬೇಲಿಗಳಿಗಿಂತಲೂ ಸಂಪೂರ್ಣ ಮುಚ್ಚಿ ಜನರಿಗೆ ತನ್ನನ್ನು ತೋರಿಸದಂತೆ, ತಾನು ಮಾತ್ರ ಜನರನ್ನು ನಿರೀಕ್ಷಿಸುವ ಒಂದು ಸ್ಥಳವು ಬೇಕಾಗಿತ್ತು. ದಾರಿಯು ಕೊನೆ ಬಂದಿತು. ಅಲ್ಲಿಯೇ ಗೋಸಬಾಳಪ್ಪನ ಗುಡಿ. ಗುಡಿಯಲ್ಲಿ ಆಗಾಗ ಒಬ್ಬಿಬ್ಬರು ಬಂದು ಹೋಗುತ್ತಿದ್ದರೂ ಅವನ ಅವಲೋಕನಕ್ಕೆ ಅದು ಯೋಗ್ಯಸ್ಥಳವೆಂದು ತೋರಿತು. ಅವನು ಒಳಗೆ ಹೋಗಿ ಕುಳಿತುಕೊಂಡನು. ಕಿಡಕಿಯೊಳಗಿಂದ ಹೊರನೋಡಹತ್ತಿದನು.

ಅವನು ಬಹಳ ಹೊತ್ತು ಕಾಯಬೇಕಾಗಲಿಲ್ಲ. ಪಾರ್ವತಿಯು ಬುಟ್ಟಿಯನ್ನು ಹೊತ್ತುಕೊಂಡು ಮನೆಗೆ ಹೊರಟಿದ್ದಳು. ಅವಳ ಕಾತರ ದೃಷ್ಟಿಯೂ, ಹಣೆಯ ಬೆವರೂ, ಶೀಘ್ರಗಮನವೂ ಅವಳ ಕಾರ್ಯ ಬಾಹುಲ್ಯವನ್ನು ಸೂಚಿಸುತ್ತಿದ್ದವು. ಅವಳು ಗುಡಿಯ ಎದುರಿಗೆ ಬಂದಾಗ ಯಾಯಾ ಒಂದು ಕೈಯಲ್ಲಿ ಒಂದು ಚೀಟಿಯನ್ನೂ ಒಂದು ಊದಿನ ಕಡ್ಡಿಯನ್ನೂ ಹಿಡಿದುಕೊಂಡು ಎದುರಾದಳು.

"ಏನ ಒಯ್ತೀ ಬುಟ್ಟ್ಯಾಗ?" ಸಹಜವಾಗಿ ಕೇಳಿದಳು.

"ಎವ್ಮ್ಯಾಗೆ ಹೊಟ್ಟು." ಪಾರ್ವತಿ ಅಂದಳು.

"ಹೊಟ್ಟಿಗೆ ಯಾಕ ಈಟ ಸಿಂಗಾರ?" ಯಾಯಾನ ವಿಚಾರ.

"ಗಾಳಿಗೆ ಹಾರೋತಲಾ!.... ಯಾಯಾ ನೀ ಇನ್ನೂ ಏಟದಿನಾ ಇರತೀ ಇಲ್ಲೇ."

"ಯಾಕ?"

"ಅಲ್ಲಾ ಧಣೇರ ಕೇಳತಿದ್ದರಂತ ಕಾವಲ ಇಡಾಕ."

"ಹೂಂ....ಮತ್ತ ಮೂರ ಮಂದಿ ಇದ್ದೀರಲಾ ನೀವು ದೆವ್ವಿನಾಂಗ."

" ನಮಗೆಲ್ಲಿ ಆಕ್ಕತಿ. ನಾ ಮನಿಯಾಗ ಬೇಕು. ಕುರಿ ಕಾಯಾಕ ಶಿವನ್ಯಾ ಹೋಗತಾನು. ಇದ್ದೂಬಿದ್ದೂ ಮನಿ ಹಿರಿಯ ಎಷ್ಟ ಗೋಳ್ಯಾ ಡಬೇಕು. ಅದಕ್ಕ ಕಾವಲಿಟ್ಟರ ತೋಟ ಬಚಾವ ಆಕ್ಕತಿ ಅಂತ........ ಹಿರಿಯು ನಿನ್ನ ಹೆಸರ ಈಗಳೇ ಹೇಳೇಬಿಟ್ಟದಾನ... ನಾಳೆ ಯಾಯಾ ಕಾವ ಲಕ್ಕ ಬರತಾಳೂ ಅಂತ."

" ಹೌಂದ? "

" ಯಾಕ ಮತ್ತ ಈಗಳೇ ಹೊಂಟನಿಂತಿದೀ ಏನ ಲೋಕಾಪುರಕ್ಕ?"

" ಅಮ್ಮಾ ಹೇಳಿ ಹಚಿಗೊಟ್ಟದಾಳ."

" ಏನಂತ! "

" ಒಂದಿನಾ ಬಂದ ಹೋಗಂತ. "

" ಮತ್ತ ಹೋಳಿಗಿ ಹೊಡಸತೀ ಏನ? "

" ಹೆಣ್ಣ ಆಗಿ ಹುಟ್ಟೇದೀನು. ಆದೋತಲಾ. "

" ಬ್ಯಾಡಾದಾವ ಗಂಟ ಬಿದ್ದಂದರ? "

" ನಶೀಬದಾಗ ಇದ್ದದ್ದ ಆಗತೈತಿ. "

" ಐ ನಶೀಬ! ನಮ್ಮ ಶಿವನ್ಯಾನ್ನ ಆಗತೀಯೇನ? "

" ಅವನ್ನೇನ ಬುಟ್ಟ್ಯಾಗ ಕಂಡರಿಸಿಗೊಂಡ ತಿರಗಲೇನ? "

" ಹಾಂಗರ ನಮ್ಮ ಧಣೇರ್‍ನ ಆಗಿಬೀಡ. ಅರ್ಧಾಹಾರೂರಾಕಿ ಅದೀ!"

" ಯಾಕಾಗಬಾರ್‍ದ! ಅಮ್ಮ ದಾಸಪ್ಪನವರಿಗೆ ಪಟಕಾಸಿದಳು. ನನ್ನ ನಶೀಬದಾಗ ಅವರ ಇದ್ರ.... ...ಆವರ ... ಪಾರೋತಿ ಧಣೇರು ನನ್ನ ಹಿಡಿದ್ರ....ತೋಟದಾಗಿಂದ ಹೊಂಬಿದ್ದ ನಿನ್ನ ಬುಟ್ಟಿ ಇಳವಿ.... ತಪಾಸಮಾಡಿ ಹೊರಗ ಹಾಕತೀನಿ ..ತಿಳಿತೇನು." ಎನ್ನುತ್ತ ಚೇಷ್ಟೆಗೆ ಅವಳು ಬುಟ್ಟಿಗೆ ಕೈಹಾಕಿದಳು.....ಕೈಗೆ ಒಂದು ಬದನೇಕಾಯಿ ಬಂತು

" ಮ್ಯಾಲ ಕಣಿಕೀ... ಕೆಳಗ....ಬದನೀಕಾಯಿ ಅದಾವೇನ ಮತ್ತ?" ಯಾಯಾ ನಗುತ್ತ ಕೇಳಿದಳು.

" ಗಾಳಿಗಿ ನಾಲ್ಕ ಕಾಯಿ ಉದರಿದ್ದೂ ಆಕೊಂಡ ಬಂದಿನಿ. " ಎಂದು ಗಡಬಡಿಸುತ್ತ ಮುಂದೆ ಓಡಿದಳು ಪಾರ್ವತಿ.

---

— ಬಾಸಿಂಗಬಲ

" ನಾಳೆ ನಾ ಕಾವಲಕ್ಕ ಇದ್ರ ಒಂದ ಕಾಯಿ ಬಿಡಾಕಿಲ್ಲಾ ಹೊರಗ!" ಯಾಯಾ ಝಾಣಾಸಿ ಹೇಳಿದಳು. " ಹಿಡೀ ಮತ್ತ ಇದೊಂದ ಕಾಯಿ. "

" ಇರಲಿ ತೊಗೊ ನಿನಗ. "

" ಐ ಒಂದ ಏನ ಮಾಡಲಿ? "

" ಹಾಂಗಾರ ನಿನಗ ಎಡ್ಡಬೇಕೇನು? " ಎಂದು ನಗುತ್ತ ಪಾರ್ವತಿ ಓಡಿದಳು.

" ಐ ನೋಡ ಇವಳು. " ಎಂದು ಮರುನಗುತ್ತ ಯಾಯಾ ಗುಡಿ ಸಮೀಪಿಸಿದಳು.



## ೪. ಸಂಜೀವನ. * * *

ಯಾಯಾ ಗುಡಿಯ ಹೆಬ್ಬಾಗಿಲಲ್ಲಿ ಕಾಲಿಟ್ಟಾಗ ಬಾಬೂನ ತಲೆಯಲ್ಲಿ ಪ್ರಚಂಡ ಕೋಲಾಹಲವೆದ್ದಿತು. ಅಲ್ಲಿಂದ ಅವನು ಓಡಿ ಹೋಗಬೇಕಾಗಿತ್ತು. ಆದರೆ ಗುಡಿ ದಾಟುವಷ್ಟರಲ್ಲಿಯೇ ಯಾಯಾನ ಕಣ್ಣಿಗೆ ಅವನು ನಿಃಸಂದೇಹವಾಗಿ ಬೀಳುತ್ತಿದ್ದನು. ಅಲ್ಲದೆ ದೊಡ್ಡವನಾಗಿ ಓಡುವದೂ ಅವನ ಮನಸ್ಸಿಗೆ ಹಿಡಿಯಲಿಲ್ಲ. ಅವನ ಹತ್ತಿರವೇ ಕಿಡಕಿಯು " ಬಾಬೂ ನಿಮ್ಮ ಮಾತುಗಳನ್ನ ಕಿವಿತೆರೆದು ಆಲಸಿದ್ದಾನೆ. " ಎಂದು ಹೇಳುವಂತೆ ಬಾಯಿತೆರೆದಿತ್ತು. ಸುಮ್ಮನೆ ನಿಲ್ಲುವದೂ ವಿವಂಚನೆಗೆ ಕಾರಣವಾಗಿತ್ತು. ಅವನು ಕೈಯಲ್ಲಿ ಒಂದು ಚೂಪುಗಲ್ಲು ತೆಗೆದುಕೊಂಡು ಬೇವಿನ ತೊಗಟೆ ಕೆತ್ತಹತ್ತಿದನು.

ಯಾಯಾ ಒಳಕ್ಕೆ ಬಂದಳು. ಒಂದೆರಡು ಹೆಜ್ಜೆ ದಾಟುವಷ್ಟರಲ್ಲಿ "ಕಟ್ ಕಟ್" ಸಪ್ಪಳವಾಯಿತು. ತಿರುಗಿ ನೋಡಿದಳು. ಬಾಬೂ ಕಲ್ಲಿನಿಂದ ಬೇವಿನ ತೊಗಟೆಯನ್ನು ಕೆತ್ತುತ್ತಿದ್ದನು.

ಬಾಬೂನ ದರ್ಶನದಿಂದ ಅವಳ ಎದೆಯು ದಸ್ಸಂದಿತು. ಅವಳಿಗೆ ಗಾಬರಿಯಾಯಿತು. ಆದರೆ ಬಾಬೂನ ಭಂಗಿಯು "ಮನಸ್ಸೇ ಸುಮ್ಮನೆ ಗಾಬರಿಗೊಳ್ಳಬೇಡ" ಎನ್ನುವಂತೆ ಧೈರ್ಯನೀಡುತ್ತಿತ್ತು. ಅವಳು ಚೇತರಿಸಿಕೊಂಡು ಮಾತನಾಡಿಸಿದಳು.

"ಧಣೇರ!"

"ಯಾರು!" ಬಾಬೂ ಮುಖ ಮೇಲಕ್ಕೆತ್ತಿ ನೋಡಿದನು. "ಯಾಯಾ! ಯಾಕ ಈಕಡೆ?"

"ಚೂಪಗಲ್ಲೀಲೆ ಗಿಡಾ ಕೋತಾರ ಅಂತ ಯಾರೋ ಹೇಳಿದರು. ನೋಡಾಕ ಬಂದ್ನಿ."

"ಹೌದು. ಕೊಯ್ದರ ರಕ್ತ ಸಿಗತತಿ."

"ರಕ್ತ?"

"ಹೌದು. ಈಗ ಕಚ್ಚಹಾಕಿದರ ಇನ್ನೆಡ್ಡ ದಿನಕ್ಕ ಅಂಟ ಸಿಗತತಿ."

"ತೋಟದಾಗ ಏನ ಗಿಡ ಕಮ್ಮೇರಿ."

"ತೋಟದಾಗ ಗಿಡ ಇನ್ನೂ ಬಲತಿಲ್ಲ. ಬಲತ ಗಿಡಕ್ಕ ಅಂಟ ಬಾಳ, ಎಳೇ ಗಿಡಕ್ಕ ಎಲೀ ಬಾಳಂತ... ಗೊತ್ತಿಲ್ಲೇನ ನಿನಗ."

"ನನಗೇನ ಗೊಂತರಿ,"

"ಅಲ್ಲಾ....ಎಂದಿನಿಂದ ಬರತೀ?"

"ಯಲ್ಲೆರೀ ಯಪ್ಪಾ?" ಯಾಯಾ ಗಾಬರಿಯಾಗಿ ಕೇಳಿದಳು.

"ಕಾವಲಕ್ಕ."

"ಇದೇ ಹೀಂಗ ಪಾರಿ ಹೇಳಿದಳು. ನನಗ ಇದ ಮಾತು...ಕಾವಲ ಕಾವಲ ಅನ್ನಾಕ ಈ ಊರಾಗೇನ ರಡರಟ್ಟಿ ಬ್ಯಾಡರ ವಸತೀ ಅದಾರೇನರಿ ಧಣೇರ"

"ಯಾಯಾ ನಿನಗ ಗೊತ್ತಿಲ್ಲ.....ಬೇಲಿ ಮೇಯತೇತಿ."

"ಚನ್ನ?"

"ಚನ್ನಲ್ಲ ನೀ....."

"ನಾನ?" ಯಾಯಾ ಅಂಜಿ ನಡುಗಿದಳು.

---

—ಬಾಸಿಂಗಬಲ

" ಹಾಂ " ಬಾಬೂ ನಗುತ್ತ ಅಂದನು. " ನೀನು. ನಿನ್ನ ಕೈಯಾಗ ಹಿಡದ ಬದನೀಕಾಯಿ ನಮ್ಮ ತೋಟದಾಗಿಂದು....ಇದಕ್ಕೇನಂತೀ ನೀನು?"

" ಇದ ಹೋಂದ....ಇದ ಪಾರೋತಿ ಕೊಟ್ಟಳು. "

" ಪಾರೋತಿ ಬುಟ್ಟ್ಯಾಗ ಏನಿತ್ತು. "

" ನನಗೇನ ಗೊಂತರಿ.....ಎಮ್ಮಿಗೆ ಹೊಟ್ಟು ಅಂತ ಅಂದಳರಿ. "

" ಹೊಟ್ಟ ಅಲ್ಲ. ಚನ್ನನ ಹೊಟ್ಟಿ ಅದು ಅದರ ತುಂಬ ಬದನೇ ಕಾಯಿ, ಮಾವಿನಕಾಯಿ ಇದ್ದು ! "

" ಹೌಂದರಿ ? " ಅವಳು ಆಶ್ಚರ್ಯದಿಂದ ಅಂದಳು. " ನಿಮಗ ಹ್ಯಾಗ ಗೊಂತರಿ ? "

" ನಾ ಮಲಕೊಂಡಾಗ ಹರದಿದ್ದರು. ಅವರಿಲ್ಲಾಗ ಚಪ್ಪರಕ ದನಾ ಬಿಚ್ಚಲಿಕ್ಕೆ ಹೋದಾಗ ನನಗ ತಿಳೀತು. ಅದಕ್ಕ ಕಾವಲ ಬೇಕು..... ಏನಂತೀ ನೀ ? "

" ನಿಮ್ಮ ಜಗಳದಾಗ ನಾಯೇನ ಸಂಬಂಧರಿ ? "

" ನನಗ ನೀಯೇನ ಸಂಬಂಧ ಇಲ್ಲಾ ? " ಬಾಬೂನ ಸವಾಲು.

" ಇಲ್ಲಾ. "

" ಇಲ್ಲಾ ? ನೋಡಿಕೋ ಗೋಸಬಾಳಪ್ಪನ ಎದುರು ಕರ್ಪೂರ ಊದಬತ್ತಿ ಹಿಡಿದು ಸುಳ್ಳಾಡಬ್ಯಾಡಾ. "

" ಐತಿರಿ. " ನಡುಗುತ್ತ ಯಾಯಾ ಅಂದಳು.

" ಏನ ಅದ ? "

" ನಿಮಗ ನುಸ್ಕಾನ ಆಗಬಾರದು ಅಂತ ನನ್ನ ಇರಾದೇ. "

ಇಬ್ಬರೂ ತಮಗೆ ತಿಳಿಯಲಾರದೇ ಮೆಲ್ಲನೆ ಗರ್ಭಗುಡಿಯ ಕಡೆಗೆ ನಡೆಯಹತ್ತಿದರು.

" ಯಾಯಾ ! " ಬಾಬೂ ನುಡಿದನು. " ಜಗತ್ತಿನಾಗ ಯಾವದು ದೊಡ್ಡದು ? "

" ಜೀವ ! "

" ಹಾಂ ! ನನ್ನ ಜೀವಕ್ಕ ಅಪಾಯಿ ಆಗಬಾರದಾಂಗ ನೀ ನೋಡಕೀ. ಅಂದವ್ಯಾಲ ನಿನ್ನ ಸಂಬಂಧ ನನಗ ದೊಡ್ಡದು.....ಈಗ ನೋಡು ಯಾಯಾ....ಚನ್ನ ನಮ್ಮ ತೋಟಾ ಹಿಡಿದು ಇಪ್ಪತ್ತು ವರುಷಾತು. ಈ ಅವಧೀಯೊಳಗ ಏನಿಲ್ಲಂದರೂ ಒಂದು ಹೊಲಾ ಕೊಳ್ಳುವಷ್ಟಾದರೂ ಅವ ಗಳಿಸಿರಬೇಕು. "

" ಅದ ಹ್ಯಾಂಗರಿ. "

" ಹ್ಯಾಂಗ ?....ನೀ ಎಂಥಾ ಮಳ್ಳ ಇದ್ದೀದಿ ಯಾಯಾ....ನಾ ಈಗ ಬಂದ ನಾಲ್ಕ ತಿಂಗಳಾಯಿತು. ಇಬ್ಬರೂ ಕೂಡಿ ತೋಟಾ ನಡಿಸಿದರ ಈಗ ನಮಗ ಇಬ್ಬರಿಗೂ ಎರಡೆರಡು ನೂರು ರೂಪಾಯಿ ಫಾಯಿದೆ ಆತು. ಬ್ಯಾಡಾ....ತನ್ನ ಹೊಟ್ಟಿ ನೆತ್ತಿ ಹೋಗಿ ವರ್ಷಾ ಎರಡು ನೂರು ರೂಪಾಯಿ ಅವಗ ಉಳೀತಾವಂತ ತಿಳಿದರೂ ಹದಿನೈದು ವರ್ಷಕ್ಕ ಮೂರು ಸಾವಿರ ಗಂಟಾತು.....ಮೂರು ಸಾವಿರ ನಗದೀಗೆ ಒಂದು ಹೊಲಾ ಬರಲಾಕಿಲ್ಲಾ ? "

" ಬಂದೋತಲಾ ? ಯಾವದು ಹಿಡೀತೀರಿ ? "

" ಹಾಗಲ್ಲಾ ಯಾಯಾ... ನಮ್ಮ ಹೊಲದವ್ಯಾಲ ಚನ್ನ ಮೂರು ಸಾವಿರ ರೂಪಾಯಿ ಫಾಯದೇ ಹೊಡದಾನ. "

" ಹೊಡೀದ ಏನ್ರಿ ! " ಯಾಯಾ ಅಂದಳು. " ಲೋಕಾಪುರದಿಂದ ಬರ್ತ ಕೈಯಾಗ ಒಂದು ಕುಡುಗೋಲ ಹಿಡಕೊಂಡ ಬಂದಿದ್ದರಿ..... ಈಗೇನ್ರಿ ಕಳ್ಳೀಗುದ್ದೀ ಹೊಲಾ ಒಂದು ಕೊಂಡೀದಾನು. ಮನಿಯಾಗ ಸೇರ ಎಡ್ಡ ಸೇರ ಬಂಗಾರ ಮಾಡಿದಾನು. ಊರಾಗೊಂದ ಮನಿ ಹಾಕಿಸೀದಾನು. ವ್ಯಾಲ ಕುರೀನೋ, ಎಮ್ಮಿನೋ, ಬಂಡಿಯೋ ಅಂತ ಅದಟ ಇರಬೇಕರಿ.....ಇದೆಲ್ಲಾ ಗಾಳಿಯಾಗ ಹಾರಿ ಬಂದ ಅನನ ಮುಂದ ಬಿತ್ತೇನರಿ. ನಿಮ್ಮದ ಪುಣ್ಯಾ ಅಲಾ..... "

" ಇಷ್ಟಿದ್ದು ಕಳ್ಳತನ ತಪ್ಪಿಲ್ಲ. "

" ಇದ ಗಳಿಸಿದ್ದೂ ತುಡುಗತನದಿಂದ ಅಲಾ. "

" ಅದಕ್ಕ ನಾ ಅನ್ನೂದು ಇದಕ್ಕ ಮುಗದಾಣ ಹಾಕಬೇಕು. "

—ಬಾಸಿಂಗಬಲ

" ಹೌಂದ ಹೌಂದೂ....ಇದರಾಗೇನತಿ. "

" ಹಾಂಗಾರ ಎಂದ ಬರತೀ ? "

" ಎಲ್ಲಿಗೀ ? "

" ಕಾವಲಕ್ಕ ? "

" ಸದ್ಯಾಕ ನಡೀರಿ...." ಯಾಯಾ ನಗುತ್ತ ಅಂದಳು.

" ಖರೇನ ? "

" ಆಗದೀ ಖರೆ. " ಯಾಯಾ ಕಿಡಗೇಡಿತನದಿಂದ ನಕ್ಕಳು.

ಬಾಬೂ ಈ ನಗೆಯನ್ನು ಒಂದು ಸಲ ಕೇಳಿದ್ದ. ಆದರೆ ಈ ಸಲ ಅದರ ಪ್ರಫುಲ್ಲಿತ ಸ್ವರೂಪವನ್ನು ನೋಡಿ ಮುಗ್ಧಗೊಂಡನು. ಕಣ್ಣುಗಳಿಂದ ದೀಪಜ್ವಾಲೆಯು ಕಿಡಗೇಡಿತನವು ಹೊರ ಹೊಮ್ಮುತ್ತಿತ್ತು. ಬಾಯಿಯು ಅರ್ಧತೆರೆದು, ಶುಭ್ರವಾದ ಸುಲಿಪಲ್ಲುಗಳ ಗವಾಕ್ಷದೊಳಗಿಂದ ಶ್ರುತಿಲಯ ವಿಲ್ಲದ ಹಾಸ್ಯರವವು ಇಂಪುಗೊಳಿಸುತ್ತಿದೆ. ಮುಖಕ್ಕೆ ಹೆಣೆದ ವಿರಲನವಿರು ಗಳು ಗುಲುಗುಲು ಹಾರುತ್ತಲಿವೆ. ಪ್ರೇಕ್ಷಣೀಯವಾದ ಗಲ್ಲಗಳ ಮೇಲೆ ಲಜ್ಜಾ ಕುಂಕುಮವು ಗುಲಾಬಿವರ್ಣಕ್ಕಿಳಿದಿದೆ.

" ಯಾಯಾ ಯಾಕ ನಗತೀ ? "

" ಹಾಂಗಾರ ಏನ ಮಾಡಲಿ ? "

" ಅಳು..."

" ಅಳೂವಂಥ ಸ್ಥಿತೀನ ಐತಿ...ಆದ್ರ ಅಳೂನ ಯಾಕೋ ಬರಲ್ದು."

" ಅಳೂವಂಥ ಸ್ಥಿತಿ ? "

" ಹೂಂ "

" ಅಂಥಾದೇನ ಆಗೇದ ನಿನಗ. "

" ನನಗೇನ ಆಗಿಲ್ಲ. ಆದ್ರ ಮುಂದಿಗೆ ಆದದ್ದಕ್ಕ ನನಗ ಅಳು ಬರ ತೇತಿ...ಇತ್ತ ಯಮ್ಮ ಹೇಳಿ ಹಚಿಗೊಟ್ಟದಾಳ. ಒಂದರೆ ದಿನ ಬರಾಕ ಬೇಕಂತ....ಇತ್ತ ಚಿಗವ್ವ ಹಾಸಿಗೆ ಹಿಡಿದು ಹದನ ದಿನಾ ಆತು....ಇನ್ನೂ ಗುಂಜಿ ತೂಕ ಕಮ್ಮ ಆಗಿಲ್ಲ....ಇತ್ತ ಪಾರೋತಿ, ಧಣೇರು...ಚನ್ನ ಅಲ್ಪ ರದು, ಚಾಲವರದು ನೀ ಬರಾಕಬೇಕ ಅಂತ ಗಾಗರಿತಾರು. ಒಂದು ಜೀವ

ಯಾವ ಕಡಿಗಿ ಸಾಯಬೇಕು... ಧಣೇರ ನೀವ ಹೇಳರಿ ನಾ ಯಾವ ಕಡೆಗೆ ಹೋಗಲಿ ಅಂತ.... ನನಗ ಎಲ್ಲಾರೂ ಬೇಕು.... ಆದರ ಎಲ್ಲಾರ್ನೂ ಸನಮಂತ ಏಕಟಾಕಿಗೆ ಮಾಡಾಕ ಹ್ಯಾಂಗ ಪುರೋಸತತಿ.... ನೀವ ಹೇಳರಿ. "

"ಯಾಯಾ ಖರೇನ ನನಗ ಇದೆಲ್ಲ ಗೊತ್ತಿತ್ತ ಅಂದರ ನಾ ಚಾರವರೀ ತಿದ್ದಿಲ್ಲ ಬಿಡ.... ನಿನಗ ಮನಸ್ಸಿಗೆ ತಿಳಧಂಗ ಮಾಡ. "

" ಧಣೇರ ಕಾವಲಕ್ಕ ಅಂದರ ನಾನ ಯಾಕ ಬೇಕ... ಕೂಲಿಕೊಟ್ಟರ ಬೇಕಾದಟ ಜನ ಬರತೈತೆಲಾ ? "

" ಈ ಮಾತ ನೀ ಆಡಬ್ಯಾಡಾ ಯಾಯಾ ! " ಬಾಬೂ ಅಂದನು. " ನೀ ಇಬ್ಬರಿಗೂ ಬೇಕಾದಾಕಿ..... ಮತ್ತ ನನ್ನ ತೋಟಾ ಬಚಾವ ಆದ್ರ ನಿನ್ನಿಂದ ಆಗಬೇಕೂ ಅಂತ ನನ್ನ ಮತ.... ಇದಕ್ಕೂ ಮೀರಿ.... "

" ಒಂದೆಡ್ಡದಿನಾರೆ ಸಬರ ಹಿಡೀತೀರೋ ಇಲ್ಲೋ ? "

" ಎಲ್ಲಿ ಹೋಗತೀ ? "

" ಘಸಕ್ಕನ ಒಂದಿನಾ ಲೋಕಾಪುರಕ್ಕ ಹೋಗಿ ಅವ್ವನ್ನ ಇಕಡೆ ಕರಕೊಂಡ ಬರತೀನಿ.... ಅಂದರ ಅವ್ವಾಗ ಅಬಚಿಗೆ ಗಂಟ ಆಕ್ಕತಿ.... ಮತ್ತ ನಾ ನಿಮಗ...."

" ಗಂಟ... ಅಹುದಲ್ಲೋ ? " ಬಾಬೂ ನಗುತ್ತ ಅಂದನು.

" ಹೂಂ. " ಯಾಯಾ ಒಂದು ಸಮಸ್ಯ ಬಿಡಿಸಿದ ಆಯಾಸದಿಂದ ಉಸಿರ್ಗರೆದು ಅಂದಳು.

" ಹಾಂಗಾರ ನಾ.... ಹೋಗತೀನಿ.... ಕತ್ತಲ ಆತ. "

" ಮನಸ್ಯಾ ಅರೆ ಏಟ ಸ್ವಾರ್ಥಿ ಇರತತಿ ಅಂತ ಅಂತೀನ ನಾ. "

" ಯಾಕ ? " ಬಾಬು ನೋವು ತಿಳಿದು ನುಡಿದನು.

" ತಮ್ಮ ಕೆಲಸಾ ಅಟ ತೀರಿಸಿ ನಡದ.... ಅಲಾ. "

" ಏನ ಬೇಕ ನಿನಗ ? "

" ಬೇಡಿದ್ದು ಕೊಡತೀರಾ ? "

ಬಾಬೂನಿಗೆ ದಿಗಿಲುಬಿತ್ತು. ಬೇಡಿದ್ದು ಕೊಡತೀರಾ ? ಪ್ರಶ್ನೆ ತೀರ ಸರಲವಾಗಿತ್ತು. ಆದರೆ ಅದು ನಿರ್ಮಿಸುವ ಚಿತ್ರರಂಗವು ಅವನ ಸ್ಮೃತಿಪಟ

ಲದಲ್ಲಿ ದೈದೀಪ್ಯಮಾನವಾಗಿ ಅವನ ಬೆರಗಿಗೆ ಬೆಂಕಿಯಿಡುತ್ತಿದ್ದಿತು. ಅವಳು ಸಂಚುಗಾರಿಕೆಗೆ ಹಣ ಕೇಳುವಳೇ ?....ಎರಡು ನೂರು ಮುನ್ನೂರು ರೂಪಾಯಿ ಒಮ್ಮೆಲೇ ಕೇಳಿದರೆ ಹೇಗೆ. ಬರುವಿಕೆಗೆ ಒಪ್ಪಿದ ಮೇಲೆ ಕೇಳಿದ ಹಣ ಕೊಡಬೇಡವೇ ? ಬಾಬೂ ತನ್ನ ವ್ಯಾವಹಾರಿಕ ಅಚಾತುರ್ಯಕ್ಕಾಗಿ ಹಳಹಳಿಸಿದನು. ಆದರೆ ಮಾತು ಸಿಡಿದು ಹೋಗಿತ್ತು. ಅದನ್ನು ಸಾವರಿಸುವದು ದುಸ್ತರವಾಗಿತ್ತು.

" ಯಾಕ, ದಿಗಲ ಬಿತ್ತೆ ? "

" ಅಲ್ಲಾ ಮನಸ್ಯಾಗ ಮೀರಿದ್ದ ಕೇಳಿದರೇ....ಅಂತ. "

" ಮನಸ್ಯಾಗ ಮೀರಿದ್ದು ಯಾವದು ಐತಿ ? "

ಅಹುದು. ತನಗೆ ಅಸಾಧ್ಯವಾವುದಾವುದು. ಹೇಳಿದ ಹಣಕೊಟ್ಟು ಜೋಡೆತ್ತು ಕೊಂಡಿದ್ದ. ಅದರ ಸಾಹಿತ್ಯ ಸಲಕರಣೆಗಳನ್ನೂ ಸಾಕಷ್ಟು ಧನ ವ್ಯಯಮಾಡಿ ಸಂಪಾದಿಸಿದ್ದ. ಇಂಥವನಿಗೆ ಯಾಯಾ ಎರಡು ನೂರು ರೂಪಾಯಿ ಮುಂಗಡ ಹಣ ಕೇಳಿದರೆ ತನ್ನ ಶಕ್ತಿಗೆ ಅಸಾಧ್ಯವಾದೀತೇ ?

" ಕೇಳ ಯಾಯಾ ? ಏನು ಬೇಕು ?"

" ಒಂದ ಮಾತು ಕೇಳಲಿ ? "

" ಮಾತ ತಿರುಗಿತಲ್ಲ ? "

" ಒಂದು ಮಿಂಚಿನಾಗ ಹತ್ತ ಇಚಾರ ಗಿರಕೀ ಹೊಡೀತಾವು..... ಮಾತ ಯಾಕ ತಿರಗಲಾಕಿಲ್ಲ ? "

" ಯಾಯಾ ? "

" ಕಟ್ಟೀ ಹತ್ತರಿ. "

ಬಾಬೂ ಯಾಯಾ ಇಬ್ಬರೂ ಕಟ್ಟೆಗಳನ್ನೇರಿ ಗರ್ಭಗುಡಿಯ ಎದುರು ನಿಂತರು.

" ಅಷ್ಟ ದೇವರಿಗೆ ಪ್ರಸಾದ ತೋರಸರಿ. "

" ಪೂಜಾರ ಇರಬೇಕಲ್ಲಾ ! "

" ಇದ್ದರ ಮತ್ತ ನಿಮಗ ಯಾಕ ಈಟ ಗಾಗಂತಿದ್ದನಿ ? "

" ಆದರ ಯಾಯಾ ನಿನ್ನ ಮಾತ ಕೇಳಲಿಲ್ಲಲಾ ? "

" ನನ್ನ ಮಾತ ಇದ ಅಲಾ ! "

" ಯಾಯಾ ! "

" ಧಣೇರ ! "

" ಎಷ್ಟ ಗಾಬರಿ ಮಾಡಿದ್ದಿಯಲ್ಲಾ ! "

" ಯಾತಕ್ಕರಿ ? "

ನಾಲಗೆ ಕಚ್ಚಿಕೊಂಡು ಬಾಬೂ ನುಡಿದನು. " ಅಲ್ಲಾ ನನಗ ಮಂತ್ರ ತಂತ್ರ ಬರೂದುಲ್ಲಾ ಹ್ಯಾಂಗ ಅಂತ. "

" ಐ ಮತ್ತು ಪೂಜಾರಿಕಿಂತ ಬಾಳ ಕಲತಾರು ಅಂತ ಹೇಳತಾರಲಾ ಜನಾ ! "

ಶಿಕ್ಷಣದಲ್ಲಿ ಧಾರ್ಮಿಕ ವಿಚಾರಗಳ ಬಗ್ಗೆ ಸ್ಥಾನವಿಲ್ಲೆಂದು ಅವಳಿಗೆ ಹೇಗೆ ಹೇಳಬೇಕು. ಹೇಳಿದರೆ ಅವಳ ಮುಗ್ಧಭಾವಕ್ಕೆ ತಿಳಿಯುವದೇ ? ಅಲ್ಲದೆ ಅವಳ ಧಾರ್ಮಿಕನಂಬಿಕೆಗೆ ತನ್ನ ಅಜ್ಞಾನದ ಚುರುಕುಕೊಟ್ಟು ಅದನ್ನು ಗಾಯುಗೊಳಿಸಲೇಕೆ!

" ತಾ ಹಾಂಗರ. " ಬಾಬೂ ಗರ್ಭಗುಡಿಯನ್ನು ಪ್ರವೇಶಿಸುತ್ತ ಅಂದನು.

ಯಾಯಾ ಕಾಯಿಯನ್ನೂ ಕಪ್ಪುರವನ್ನೂ ಅವನ ಎದುರಿಗಿಟ್ಟಳು. ಬಾಬೂ ಕಾಯಿಯನ್ನು ಒಡೆದು ಅದನ್ನು ನೈವೇದ್ಯ ತೋರಿಸಿದನು. ಕಪ್ಪುರ ಹೊತ್ತಿಸಿ ಮಂಗಲಾರತಿ ಮಾಡಿದನು.

" ಅನಂತಕೋಟಿ ಬ್ರಹ್ಮಾಂಡನಾಯಕ ದೇಪ ದೇವೋತ್ತಮ, ದೇವ ಶಿಖಾಮಣಿ, ಕಪಟನಾಟಕ ಸೂತ್ರಧಾರ, ಪುರಾಣ ಪುರುಷೋತ್ತಮ, ರಮಾಬ್ರಹ್ಮರುದ್ರೇಂದಾದಿತರಮಣ ಮುಖ್ಯ ಪ್ರಾಣಾಂತರ್ಗತ ಲಕ್ಷ್ಮೀಹಯ ಗ್ರೀವಸ್ವಾಮಿ ಪರಾಕ್ ಅರ್ಥರ್ವಣ ವೇದಪ್ರೀಯಾಂ ಅರ್ಥವೇದಸೇವಾಂ ಧಾರಯಾಮಿ !

ಆ ಉವ್ಹಾ, ಉವ್ಹಾ ಊ, ಅಹಮನ್ನಮಹಮನ್ನಮಹನಮನ್ನಂ ಅಹ ಮನ್ನಾದೋ, ಉಹಮನ್ನಾದೋ, ಅಹಮನ್ನಾದಃ ಅಹಗ್ನಿಶ್ಲೋಕಕೃತ,

—ಬಾಸಿಂಗಬಲ

ಆಹಗ್ನಿಶ್ಲೋಕಕೃತ, ಆಹಗ್ನಿಶ್ಲೋಕಕೃತ, ಆಹಮಸ್ಮಿನ್ನಪ್ರಥಮಾಜಾ ರತಾ.... ಸ್ವಾಹಾ....ಯೋಮಾದಧಾತಿ ರತುನಾ ಅಮೃತಸ್ಯನಾ, ತ್ರಿವರ್ಣ ಜ್ಯೋತಿ ನಿತ್ಯಪರ್ಷುಚ. " ಎಂದು ಮೂರು ಸಲ ಅಂದು ಕಾಯಿಯಲ್ಲಿ ಅಂಗಾರವನ್ನೂ ಮಾಂಗಲ್ಯ ತುಳಸಿ ಹೂಗಳನ್ನೂ ಇರಿಸಿ ಅವಳ ಉಡಿಯಲ್ಲಿ ಹಾಕಿದನು.

ಯಾಯಾ ನಮುಸ್ಕರಿಸಿದಳು.

" ಇನ್ನ ನಡೀರಿ. " ಯಾಯಾ ಅಂದಳು.

" ಎಲ್ಲಿಗೆ ? "

" ಕತ್ತಲಾತು....ಮನೀಮಟ ಕಳಸರಿ. "

" ಅಂತೂ ನೀ ನಿನ್ನ ಕೆಲಸಾ ಪೂರಾ ತೀರ್ಸಿ ನನಗ ಮೋಕಳೀಕ ಮಾಡಾಕೀ. "

" ಹಂ. " ಯಾಯಾ ಅಂದಳು. " ನಾನ ನಿಮ್ಮ ಉಡಿಯಾಗ ಬಿದ್ದ ಮ್ಯಾಲ...ನನ್ನ ಎಲ್ಲಾ ಕೆಲಸ ನಿಮ್ಮೂನೇ ಅಲಾ. "

ಬಾಬೂ ಅವಳ ಮಾತಿನ ಹೊಲಬನ್ನು ತಿಳಿದನೋ ಇಲ್ಲವೊ ಇಬ್ಬರೂ ಊರ ಮೆಟ್ಟಲುಗಳನ್ನು ಹತ್ತುತ್ತ ನಡೆದರು.

---

## ೫. ಅಗ್ನಿರಸ. * * *

ಗಾಡಿಯು ಸಿದ್ಧವಾಗಿ ತೋಟದ ಹತ್ತಿರ ಬಂದಿತು. ಚನ್ನ, ಪಾರ್ವತಿ ಗಾಡಿಯಿಂದ ಇಳಿದರು. ಶಿವನ್ಯಾ ಲಗಾಮು ಕೈಯಲ್ಲಿ ಹಿಡಿದು ಕುಳಿತನು. ಇಬ್ಬರೂ ಒಳಗೆ ಹೋದರು. ಯಾಯಾ ಮತ್ತು ಬಾಬೂ ಹರಟೆ ಹೊಡೆಯುತ್ತ ಬಾರಿಯ ಹತ್ತರ ಕುಳಿತಿದ್ದರು. ಇಬ್ಬರೂ ಒಳಗೆ ಬಂದುದನ್ನು ನೋಡಿ ಗುಡಿಸಲದ ಹತ್ತಿರ ಬಂದರು. ಗುಡಿಸಲದಲ್ಲಿ ಇಟ್ಟ ಎಂಟು ಬುಟ್ಟಿ ತುಂಬ ಕಾಯಿಪಲ್ಲೆಯನ್ನು ಎತ್ತಿ ಗಾಡಿಯಲ್ಲಿ ಇಟ್ಟರು. ಸ್ವಲ್ಪ ಕಣಿಕೆ

ಯನ್ನೂ ತುಸು ಹೊಟ್ಟನ್ನೂ ಚನ್ನವೀರ ಗಾಡಿಯ ಕೆಳಗೆ ಹಾಕಿ ಮೇಲೆ ಒಂದು ಗುಡಾರ ಚಲ್ಲಿದನು. ಗುಡಾರದ ಮೇಲೆ ಬುಟ್ಟಿಗಳನ್ನು ಇಟ್ಟನು. ಒಂದು ತತ್ರಾಣಿಯನ್ನು ಗಾಡಿಯ ಕಳಿಗೆಗೆ ಕಟ್ಟಿದನು. ಒಂದೆರಡು ಗೊಂಗಡಿಗಳನ್ನು ಗಾಡಿಯಲ್ಲಿ ಒಗೆದನು. ಪಾರ್ವತಿ ಗಾಡಿಹತ್ತಿದಳು. ಚನ್ನನೂ ಗಾಡಿ ಏರಿದನು.

" ಹೊತ್ತ ಮುಣುಗೂಟಲೇ ತಿರಗತೀವಿ. " ಚನ್ನ ಅಂದನು.

" ಚನ್ನಾ " ಬಾಬೂನ ಕಡೆಗೆ ನೋಡುತ್ತ ಯಾಯಾ ಅಂದಳು. " ನಾನು ಬರಲಿ ? "

" ಬಾರಲಾ ! " ಚನ್ನ ಅನುಮಾನಿಸಿದನು.

" ಮತ್ತ ಕಾವಲಕ್ಕ ಯಾರು ? " ಬಾಬೂ ಕೇಳಿದನು.

" ನೀವ ಅದೀರಲ್ಲಾ. " ಯಾಯಾ ಅಂದಳು. " ಗೋಕಾವಿ ನೋಡದ ಬಾಳ ದಿನಾ ಆತು..... " ಎಂದು ಬಂಡಿಯೇರಿದಳು.

" ಯಾಯಾ !" " ಬಾಬೂ ನಗುತ್ತ ಅಂದನು." ಚನ್ನ ಸರಂಜಾಮು ಸಹಿತ ಹೊರಟಾನು. ಈಗ ವೇಳೆ ಆಯಿತು.... ಈದಿನ ತಿರುಗಿ ಬರತಾನೋ ಇಲ್ಲೋ....ನಾಳಿಗೆ ಬಂದರ ಬಂದ.... ನೋಡು ಈದಿನ ಅಲ್ಲಿ ವಸ್ತಿ ಮಾಡಬೇಕಾದರ ಹೋಗು."

"ಚನ್ನಾ ಈದಿನ ಬರಾಣುಲಾ ತಿರಗಿ?" ಯಾಯಾ ಕೇಳಿದಳು.

"ನೇಮ ಹತ್ತಾಣಿಲ್ಲಾ."

"ಹಾಂಗಾರ ಹೊಡೀ ಚಕಡೀ." ಯಾಯಾ ಟಣ್ಣನೇ ಕೆಳಗೆ ಹಾರಿ ನುಡಿದಳು.

ಚನ್ನವೀರನಿಗೂ ಅಷ್ಟೇ ಬೇಕಾಗಿತ್ತು. ಶಿವನ್ಯಾ ಕೈಯಲ್ಲಿ ಹಿಡಿದ ಹಗ್ಗಗಳನ್ನು ತನ್ನ ಕೈಯಲ್ಲಿ ತೆಗೆದುಕೊಂಡು ಬಾರಕೋಲಿನಿಂದ ಎತ್ತುಗಳಿಗೆ ಝಾಡಿಸಿದನು. ಅಪ್ಪಣೆಯ ಚುರುಕು ಬೆನ್ನಿಗೆ ಬಿದ್ದಕೂಡಲೇ ಎತ್ತುಗಳು ಹಾರಿ ಓಟಗುಟ್ಟಿದವು. ಗಾಡಿಯೂ ಓಡಹತ್ತಿತು. ಹಗುರ ಬಂಡಿಯು ಒಗ್ಗಾಲಿಯಾಗುವದೋ ಎಂದು ಎನಿಸುತ್ತಿತ್ತು. ಶಿವನ್ಯಾ ಮತ್ತು ಪಾರ್ವತಿ ಹತ್ತಿರ ಹತ್ತಿರ ಸರಿದು, ಬಂಡಿಯ ಕಳಿಗೆಗಳನ್ನು ಬಿಗಿ

ಯಾಗಿ ಹಿಡಿದು, ಅಪ್ಪಳಿಸುತ್ತಿರುವ ಗಾಡಿಯ ಘಳಿಗಳಿಗೆ ಮೋರೆ-ಮುದುಡಿ, ಮುಟುರಿಕೊಂಡು ಕುಳಿತಿದ್ದರು. ಬಾರಕೋಲಿನ ಚುರು-ಕಿನ ಅಮಲು ಕಡಿಮೆಯಾದ ಮೇಲೆ ಗಾಡಿಯು ನಿಧಾನವಾಗಿ ಸಾಗಿತು. ಒಳಗೆ ಕುಳಿತವರು ಹಾಯಾಗಿ ಉಸಿರು ಹಾಕಹತ್ತಿದರು. ಗಾಡಿಯು ಹಳ್ಳದ ತಗ್ಗಿನಲ್ಲಿ ಮರೆಯಾಗಿ, ಗಿಡದ ಸಾಲುಗಳಲ್ಲಿ ಕಾಣದಾಯಿತು.

ಬಾಬು ಮೋರೆ ತಿರುವಿದನು. ಬದಿಯಲ್ಲಿ ಯಾಯಾ ಇರಲಿಲ್ಲ. ತನ್ನ ತೋಟದ ಉತ್ತ್ರವನ್ನು ವಿನಿಯೋಗಿಸಲು ಇನ್ನಿತರರಿಗೆ ಕೊಟ್ಟ ಅನುಮಾನ ಒಂದು ಕಡೆಗೆ, ತನ್ನ ಹತ್ತಿರ ಒಂದು ಜೀವವು ಸುಳಿಯ ದಲ್ಲ ಎಂಬ ಅಪಮಾನ ಒಂದು ಕಡೆಗೆ ಅವನ ಮೋರೆಯ ಉತ್ಸಾಹ-ವನ್ನು ಕಮರಿಸಿತು. ಮೈಯೆಲ್ಲವೂ ನಿರುತ್ಸಾಹದಿಂದ ಜುಮ್ಮೆಂದಿತು. ಐಹಿಕ ಜ್ಞಾನವು ಒಂದು ಸಲ ಪಾರಮಾರ್ಥಿಕ ವಿಚಾರವನ್ನೂ ಮನಸ್ಸಿ-ನಲ್ಲಿ ಹಿಡಿದುತಂದಿತು. ಬಾಬು ತೋಟದಲ್ಲಿ ದಿಟ್ಟಿ ಚೆಲ್ಲಿದನು. ಬಾರಿ-ಮಡಿಗಳು, ಗುಡಿಸಲು, ತೋಪು, ಮಂಟಪ ಎಲ್ಲವೂ ಭಣಭಣ ಸುರಿ-ಯುತ್ತಿದ್ದವು. ಅವನು ಒಳಗೆ ನಡೆದನು. ಒಂದು ಕಳ್ಳದನ ಬೇಲಿ-ಯನ್ನು ಬಿರಿದು ಒಳನುಗ್ಗಿತ್ತು. ಬಾಯ್ಮಾಡಿ ಓಡಿಸುವಷ್ಟು ತ್ರಾಣವೂ ಬಾಬುನಲ್ಲಿ ಇರಲಿಲ್ಲ. ನಿಸ್ತೇಜವಾದ ಒಂದು ಕೈಯನ್ನು ಎತ್ತಿದನು. ದನಕ್ಕೆ ಅಷ್ಟು ಸಾಕಾಯಿತು. ಆಗಲೇ ಬಾಯಿಯಲ್ಲಿ ನಾಲ್ಕಾರು ಗಿಡ-ಗಳನ್ನು ಕಚ್ಚಿಕೊಂಡು ಬೇಲಿಯ ಇನ್ನೊಂದು ಭಾಗವನ್ನು ಹರಿದು ಹೊರನುಗ್ಗಿತು. ಅವನು ಮೆಲ್ಲಗೆ ಅದು ಒಳನುಗ್ಗಿದ ಕಡೆಗೆ ಹೋದನು. ದನಗಳು ಸುಲಭವಾಗಿ ಒಳಸೇರುವಷ್ಟು ದಾರಿಯು ಅಲ್ಲಿ ತೆರೆದಿದ್ದಿತು. ಬದಿಗೆ ಸರಿದ ಜಾಲಿಯ ಟೊಂಗೆಗಳನ್ನು ಅವನು ಎತ್ತಿತಂದನು. ಗುಡಿ-ಸಲದಿಂದ ಒಂದು ಕೈಗುದ್ದಲಿಯನ್ನು ತಂದು ನೆಲವನ್ನು ಅಗಿದನು. ತಗ್ಗಿನಲ್ಲಿ ಟೊಂಗೆಯನ್ನು ಊರಿ ಮಣ್ಣು ಮೆತ್ತಿದನು. ಮುಗಿದ ಕೆಲಸ-ವನ್ನು ಬಹು ಆಸ್ಥೆಯಿಂದ ಅವಲೋಕಿಸಿ, ಸಮಾಧಾನವಾದ ಮೇಲೆ ಮರಳಿದನು. ಗುದ್ದಲಿಯನ್ನು ಗುಡಿಸಲಿನಲ್ಲಿ ಇಟ್ಟು ಮಡಿಗಳ ಕಡೆಗೆ ಹೋದನು. ಮಡಿಚಿದ ಮಡಿಗಳನ್ನು ಸರಿಪಡಿಸಿದನು. ಬಾಗಿದ ಗಿಡ-

ಗಳನ್ನು ಸರಲವಾಗಿ ನಿಲ್ಲಿಸಿದನು. ನೀರಹಂಗಳನ್ನು ಇಳುಕಲಾಗಿಸಿದನು. ಬಾರಿಯ ಹತ್ತಿರ ಬಂದು, ತಗ್ಗುಗಳಲ್ಲಿ ನಿಂತ ನೀರಿನಿಂದ ಕೈತೊಳೆದನು.

ಗುಡಿಸಲದ ಹೊರಗೆ ಹೊರಸಿನ ಮೇಲೆ ಹಾಯಾಗಿ ಒರಗಿದನು. ಹೊರಸಿನ ಮೆದಿಹುಲ್ಲಿನ ಹುರಿಯು ಅವನ ಮೈಗಳಿಗೆ ತಾರುತಂತಿಗಳಂತೆ ಬಿರುಸಾಗಿ ಕೊರೆದವು. ತೊಟ್ಟಿಲದಂತೆ ತೂಗಿ ಅವನನ್ನು ಎತ್ತಿ ಹಾರಿಸಿದವು. ಬಾಬು ಎದ್ದು ಒಳಗಿನ ಒಂದು ಕಂಬಳಿಯನ್ನು ಅದರ ಮೇಲೆ ಹಾಸಿ ಮೇಲೆ ಒರಗಿದನು. ಕಂಬಳಿಯ ಕುರಣಿಗಳು ಅವನ ಮೈಗೆ ಮುಳ್ಳುಗಳಂತೆ ನಟ್ಟವು. ಕಂಬಳಿಯೆಲ್ಲವೂ ಕಾಯ್ದ ಹಂಚಿನಂತೆ ಅವನ ಮೈಗೆಲ್ಲವೂ ಚುರುಕು ಕೊಟ್ಟಿತು. ಬಾಬು ಅಪ್ರತಿಭನಾಗಿ ಎದ್ದನು. ಕಂಬಳಿಯನ್ನು ಗುಡಿಸಲಲ್ಲಿ ಬಿಸುಡಿದನು. ಹೊರಸನ್ನು ಎರಡು ಕಾಲುಗಳ ಮೇಲೆ ನಿಲ್ಲಿಸಿದನು. ಗೋದನೆಯಲ್ಲಿಯ ದನಗಳು ಸದ್ದು ಮಾಡಿದವು. ಅವನು ಕೊಟ್ಟಿಗಗೆ ಹೋಗಿ ನೋಡಿದನು. ಕಡಿದ ಮೇವು ತೀರಿತ್ತು. ಮೇವು ಕೊರಕವನ್ನು ತೆಗೆದುಕೊಂಡು ಮೇವು ಕೊರೆಯಹತ್ತಿದನು. ಸಾಣೆಹಿಡಿಯಿಸಿ ನಾಲ್ಕೇ ದಿನವಾಗಿತ್ತು. ಆದರೆ ಅವನು ಅದೆಷ್ಟು ಒತ್ತಿದರೂ ಅದು ಕೊರೆಯಲೊಲ್ಲದ್ದಕ್ಕೆ ಅವನಿಗೆ ಅಚ್ಚರಿಯಾಯಿತು. ಅದರ ಅಭಂಡತನವೋ, ತನ್ನ ಅಶಕ್ತತೆಯೋ ಅವನಿಗೆ ತಿಳಿಯಲಿಲ್ಲ. ಕೊರಕವನ್ನು ಬದಿಗಿಟ್ಟು ಕುಡಗೋಲಿನಿಂದ ಒಂದೆರಡು ಪೆಂಡಿಗಳನ್ನು ಕತ್ತರಿಸಿ ದನಗಳಿಗೆ ತಿನ್ನಲು ಇಟ್ಟನು. ಒಂದು ಖರಾರವನ್ನು ತೆಗೆದುಕೊಂಡು ಎತ್ತುಗಳನ್ನು ತಿಕ್ಕಹತ್ತಿದನು ಎತ್ತು ಕಾಲುಝಾಡಿಸಿ ಇಟ್ಟಿತು. ಬಾಬೂನ ಕಾಲು ಬುಡದಲ್ಲಿ ಸಿಕ್ಕಿತು. ಬಾಬು ಎತ್ತು ನೂಕಿ ಕಾಲು ಜಗ್ಗಿದನು. ಬೀದಿಯ ಕಲ್ಲುಗುಂಡದಂತೆ ಅದರ ಕಾಲು ಬಾಬೂನ ಕಾಲ ಮೇಲೆ ಹರಿದು ಹೋಯಿತು. ನೋವು ತಾಳಲಾರದೆ ಬಾಬೂ ಗುಡಿಸಲದ ಹೊರಗೆ ಬಂದನು. ಬಾರಕೋಲು ತೆಗೆದುಕೊಂಡು ಎತ್ತಿಗೆ ಒಂದೆರಡು ಇಳಿಸಬೇಕೆಂದನು. ಆದರೆ ತಪ್ಪು ತನ್ನದೇ ಇರುವಾಗ ಆ ಮೂಕಪ್ರಾಣಿಯನ್ನು ಬಡಿದೇನುಫಲ ಎಂದು ಸ್ವಲ್ಪ ಹೊತ್ತು ಸುಧಾರಿಸಿಕೊಂಡನು.

—ಬಾಸಿಂಗಬಲ

ನೋವು ಕಡಿಮೆಯಾದಮೇಲೆ ಹೆಜ್ಜೆಹಾಕುತ್ತ ತೋಟದ ಬಾಗಿಲಿಗೆ ಬಂದನು. ಬಾಗಿಲ ಹಾಕಿದನು. ಊರದಾರಿ ಹಿಡಿದನು.

ಮನಸ್ಸು ಮಲೀನವಾಗಿತ್ತು. ಗಿಮಿಗಿಮಿ ತಿರುಗಿನಿಂತಾಗ ತಲೆಯೆಲ್ಲವೂ ತಿರುಗುತ್ತ ದೇಹವೆಲ್ಲವೂ ಹೊಯ್ದಾಡುತ್ತ ಮನಸ್ಸಿನ ಶೂನ್ಯತೆಯನ್ನು ಬಿಂಬಿಸುವಂತೆ ಬಾಬೂನ ಸ್ಥಿತಿಯಾಗಿತ್ತು. ಆಗ, ಅವನಿಗೆ ಈ ಜಗತ್ತು, ಈ ತೋಟ, ಬಾರಿ, ಊರು, ಕೇರಿಗಳೆಲ್ಲವನ್ನು ಬಿಟ್ಟು ದೂರ ದೂರ, ಕುರುಬೆಟ್ಟದ ಗವಿಯಲ್ಲಿ, ನಂದಿಯ ಹಳ್ಳದ ದಂಡೆಗೆ ನಿತಾಂತವಾಗಿ ಕುಳಿತು ಅಂತರಗಂಗೆಯನ್ನು ಪರೀಕ್ಷಿಸಿ, ಸಮಾಧಾನ ಹೊಂದಬೇಕೆಂಬ ಹಿರಿಯಾಸೆ ಒಡಮೂಡಿತು. ಮನುಷ್ಯರ ಮಾತು, ದನದ ಸದ್ದು, ಪಕ್ಷಿಗಳ ಕಿಲಕಿಲಾಟ, ಹುಳಹುಪ್ಪಡಿಗಳ ಜೊಂಯ್‌ಜೊಟ್ಟು ಅವನಿಗೆ ಅಸಹ್ಯಕ್ಕಿಟುಕೊಂಡಿತು ಇಷ್ಟು ಭಾವೋದ್ರೇಕವಾಗಲು ಕಾರಣವೇನೆಂಬುದು ಅವನು ತನ್ನನ್ನು ತಾನೇ ಪರೀಕ್ಷಿಸಿದಾಗ ತಿಳಿಯಲಿಲ್ಲ. ಶೂನ್ಯವಾದ ತಲೆಗೆ, ನಿರ್ಜೀವವಾದ ಹೆಜ್ಜೆಗಳು ದಾರಿಯ ಉದ್ದವನ್ನು ಅಳೆದು ತೋರಿಸುತ್ತಿದ್ದವು.

ದೂರದಲ್ಲಿ ಎದುರಿಗೆ ಯಾಯಾ ಬರುತ್ತಿದ್ದಳು. ಅವಳನ್ನು ತಪ್ಪಿಸಬೇಕೆಂದು ಬಾಬೂ ವಿಚಾರಿಸಿದನು. ಆದರೆ ಅವಳ ನೋಟದಿಂದ ಮರೆಯಾಗುವದು ಅಸಾಧ್ಯವಾಯಿತು. ಏನೂ ಅರಿಯದವನಂತೆ ಬಾಬು ಎದುರಾದವರನ್ನು ಧೈರ್ಯದಿಂದ ಎದುರಿಸಲು ಅನುವಾದನು. ಯಾಯಾ ತೀರ ಸನಿಹಕ್ಕೆ ಬಂದಳು. ಅವನ ರೂಪ ನೋಡಿ ಅವಳಿಗೆ ಅಚ್ಚರಿಯಾಯಿತು.

" ಧಣೇರ. " ಆಕೆ ಅಂದಳು. " ಮೈಯಾಗ ಸರಿಯಿಲ್ಲ? "

" ಹಡೆದ ತಾಯಿ ಕೂಡ ಒಮ್ಮೊಮ್ಮೆ ಕೂಸಿನ್ನ ಮರೀತಾಳ. " ಬಾಬೂ ಅಂದನು.

" ಹೌಂದೂ. ಹೆರ್‍ಯಾಗಿನಿಂದ ಸಂಜೀಮಟ ಕೂಸಿನ್ನ ಹಿಡದರ ಕೂಸೂ, ತಾಯಿ ಮಟಮಟ ಮಧ್ಯಾಹ್ನ ಆದರೂ ಉಪಾಸ. "

" ಅಡಿಗೆಗೆ ಹೋಗಬೇಕಾದರ ಕೂಸಿನ ಕೈಯಾಗ ಒಂದು ಗಣಿಕೆ ಕೊಟ್ಟು ಆದರೂ ಹೋಗತಾಳ. "

" ಚಂದಪ್ಪನ್ನ ನೋಡಿ ಕೂಸು ನಗುತ್ತಿದ್ದರ ಗಣಿಕೆ ಯಾಕಬೇಕು ?"

" ಒಮ್ಮೆ ದಿಟ್ಟಿಸಿನೋಡಿ ಆದರೂ ಹೋಗತಾಳ. "

" ಹೋಗುವಾಗ ಮರೆತರೂ ಬಂದಾಗ ಮತ್ತೆ ನೋಡತಾಳ. " ಎಂದು ನಗುತ್ತ ಯಾಯಾ ಬಾಬೂನ ಕೈಹಿಡಿದಳು.

ಬಾಬೂ ನಕ್ಕನು. ಅವಳು ಕೈಹಿಡಿದಾಗ ಅವನ ಮೈ ಜುಮ್ಮೆಂದಿತು. ಆದರೆ ಕೈಯನ್ನು ಬಿಡಿಸಿಕೊಳ್ಳುವ ಮನಸ್ಸೂ ಆಗಲಿಲ್ಲ. ಹಿಡಿತವೂ ಎಡ ಚೆಡಚಾಗಹತ್ತಿತು. ಅವನು ಬೆರಗುಗಣ್ಣುಗಳಿಂದ ಸುತ್ತಲೂ ನೋಡಿದನು. ಬೇವಿನ ಗಿಡದ ನೆರಳಲ್ಲಿ ಗಿಳಿದಂಪತಿಗಳು ಒಂದನ್ನೊಂದು ಮುದ್ದಿಡುತ್ತಿದ್ದವು. ಗೊರವಂಕವು ತನ್ನ ಗೆಳತಿಯನ್ನು ಕರುಣರವದಿಂದ ಕೂಗುತ್ತಿತ್ತು. ಒಂದು ಗಂಡು ಗುಬ್ಬಿಯು ಒಂದು ಹೆಣ್ಣುಗುಬ್ಬಿಯ ಬೆನ್ನಟ್ಟಿತ್ತು. ಮದವೇರಿದ ಒಂದು ಹೋರಿಯು ಬಾಲವನ್ನು ನೆಗಹಿಕೊಂಡು ಕೊಕ್ಕರಿಗಣ್ಣಿನಿಂದ ಬದುವಿನಲ್ಲಿ ಮೇಯುತ್ತ ನಿಂತಿದ್ದ ಆಕಳನ್ನು ನಿಟ್ಟಿಸುತ್ತಿತ್ತು. ಒಂದು ಬಿಲದಲ್ಲಿ ಒಂದರ ಬೆನ್ನಹಿಂದೆ ಎರಡು ಇಲಿಗಳು ಹೊಕ್ಕವು. ಗಂಡುನವಿಲು ಗರಿಪಸರಿಸಿ ಹೆಣ್ಣುನವಿಲಿನ ಎದುರು ಕುಣಿಯುತ್ತಿತ್ತು. ಬಾಬೂ ದೃಷ್ಟಿಯನ್ನು ಹೊರಳಿಸಿ ಯಾಯಾನ ಕಡೆಗೆ ನೋಡಿದನು. ಅವಳ ಮೋರೆಯ ಮೇಲೆ ಗೆಲವು, ಆಸೆ, ನಗು, ಉತ್ಸಾಹ, ಕರುಣೆಗಳು ಒಂದರೊಡನೊಂದು ಸೆಣಸಾಡುತ್ತಿದ್ದವು. ಬಾಬೂ ಮೆಲುದನಿಯಲ್ಲಿ " ಯಾಯಾ " ಎಂದನು.

ಯಾಯಾ ಮೋರೆಯೆತ್ತಿ ಅವನನ್ನು ನೋಡಿದಳು.

" ಹೋಗುವಾಗ ಹೇಳಿ ಹೋಗಬಾರದು? " ಬಾಬೂ ಅಂದನು.

" ನಾನು ಹೇಳಿಹೋದದ್ದಕ್ಕ ಸಾಕ್ಷೀ ತೋರಸತೀನಿ ಬರ್ರಿ." ಎಂದು ಅವಳು ಅವನನ್ನು ತೋಟದೊಳಗೆ ಕರೆದೊಯ್ದಳು. " ಆಕಾ...! " ಆಶ್ಚರಿಗೊಂಡು ಅವಳು ಅಂದಳು. " ಎಲ! ದನಾ ಬಂದಿತ್ತೋ ಏನೋ "

" ಹೌದು. "

" ಐ. ಹೊಡೀಬಾರದು? ನಾ ತೋಟದಾಗ ಇದ್ದರ ಗಿಡದ ಮೇಲಿನ ಇಣಚಿ ಕೆಳಗ ಇಳಿಯಾಕ ಅಂಜತೈತಿ. ಧಡಧಡೀತ ಒಂದು ಮಡಿಗೆ

---

—ಬಾಸಿಂಗಬಲ

ಮಡೀನ ತಿನ್ನೂಮುಟಾ ಏನಮಾಡತ್ತಿದ್ದಿರೀ ಅಂತೀನಿ....ಎಲ್ಲಿಂದ ಬಂತು ಅದು ? "

" ಅಕಾ ಆ ಜಾಲೀಟೊಂಗಿ ಹಚ್ಚೀನಲ್ಲಾ.... ಅಲ್ಲಿಂದ ಬಂತು, ಈ ಕಡೆಗೆ ಒಂದು ಜಾಲೀಟೊಂಗಿ ಅದ ಅಲ್ಲಾ, ಅಲ್ಲಿಂದ ಹೋಯಿತು "

" ಹಿಡಿದು ಕೊಂಡವಾಡಕ್ಕ ಹಾಕಬಾರದು. ಈ ದನಾ ಕಟ್ಟಿದವರ ಉರುಣಿಗೆ ಆದ್ರೂ ಏಟ ಐತಿ....ಅಂತ ಅಂತೀನಿ. ಸರ್ರಾಸ ಚರಾಯಿಗೆ ಮೋಕಳೀಕ ಅಂತ ತಿಳದ್ದಾರೋ ಯಾಂಬಲ್ಲ..... ಅಲ್ಲಾ ಇಷ್ಟ ತಿನ್ನು ಮುಟಾ ನೀವು ಸುಮ್ಮನರೆ ಹ್ಯಾಂಗ ಇದ್ದಿರೀ ಅಂತ ಅಂತೀನಿ? "

" ಏನೋ ....ಯಾಯಾ ತಲೆ ತಿರಗತಿತ್ತು. "

"ಅಹುದು?..." ಕರುಣೆಯಿಂದ ಅಂದಳು. " ತಲಿ ನೋಯುತ್ತೈತಿ?"

" ಹೂಂ "

" ತಿಕ್ಕಲಿ? "

" ಬ್ಯಾಡಾ. "

" ತುಸು ತಿಕ್ಕತೀನಿ ಬರ್ರಿ. "

ಯಾಯಾ ಗೋಟುನಿಂತ ಹೊರಸನ್ನು ಮಲಗಿಸಿದಳು. ಗುಡಿಸಲ ಪಲ್ಲಿಯ ಕಂಬಳಿಯನ್ನು ಅದರ ಮೇಲೆ ಹಾಸಿದಳು. ಬಾಬೂ ಅದರ ಮೇಲೆ ಒರಗಿದನು. ಅರ್ಧತಾಸಿನ ಹಿಂದೆ ಮೊದಿಹುರಿಗಳು ತಾರುತಂತಿ ಗಳಂತೆ ಅವನ ಬೆನ್ನಿಗೆ ಕೊರೆದಿದ್ದವು. ಕಂಬಳಿಯು ಕಾದಹಂಚಿನಂತೆ ಮೈ ಸುಟ್ಟಿತ್ತು. ಕುರುಣಿಗಳು ಜಾಲಿಯ ಮುಳ್ಳುಗಳಂತೆ ನಟ್ಟಿದ್ದವು. ಅದೇ ಈಗ ವಿಪರೀತವಾಗಿ ಕಂಡಿತು. ಒಟ್ಟು ಹೊರಸೇ ಕುತ್ತನಿಯ ಪರ್ಯಂಕವಾಗಿತ್ತು. ಮೇಲೆ ತನ್ನ ಶೀತಲವಾದ ಬೆರಳುಗಳಿಂದ ಯಾಯಾ ಅವನ ಹಣೆಯನ್ನು ಮೆಲ್ಲನೆ ನೇವರಿಸುತ್ತಿದ್ದಳು. ಮಾನಸಿಕ ಘಟನೆಯು ದೈಹಿಕ ಪರಿಶ್ರಮವನ್ನು ಇಷ್ಟೊಂದು ಪರಿಣಾಮಕಾರಕವಾಗಿ ಪುನರ್ಘಟಿ ಸುತ್ತದೆಂದು ಅವನು ಎಣಿಸಿರಲಿಲ್ಲ. ವಸ್ತುಗಳ ಬಹಿರಂಗ ಬದಲಾಗದಿ ದ್ದರೂ ಮಾನಸಿಕ ಅಂತರಂಗದ ಪರಿವರ್ತನೆಯಿಂದ ಬಹಿರಂಗದ ಬಣ್ಣವೂ ಉತ್ಸಾಹಪೂರಿತವಾಗುವದನ್ನು ಜೀವನದಲ್ಲಿಯೇ ಇಂದು ಅರಿತನು. ಕರು

ಕೆಯ ಪ್ರಬಲಸಿಂಚನದಿಂದ ಅವನ ಅಂತರಂಗದ ಜೀವಕುಸುಮವು ಪ್ರಫುಲ್ಲಿತವಾಯಿತು ಬೇಸರ, ತಾತ್ಸಾರ, ಅವಮಾನಗಳಿಂದ ನೊಂದು ಬೆಂದ ಮನಕ್ಕೆ ಇಂದು ದಯೆಯ ಸೋಂಕಿನಿಂದ ಪರಿಮಳ ಆವರಿಸಿತು. ಅವನು ಆಶೆಯಿಂದ ಯಾಯಾನ ಕಡೆಗೆ ನೋಡಿದನು.

" ಏನು? " ಅವಳು ಕೇಳಿದಳು.

" ಯಾಯಾ! ಒಂಟಿ ಜೀವನಕ್ಕೆ ಬೇಜಾರವೆಷ್ಟು. ಅಲ್ಲವೇ? "

" ಎಕ್ಕಾಗಾಡಿಗೆ ಜೋಡೆತ್ತು ಎಂದ ಹೂಡತೀರೀ? " ಯಾಯಾ ಮೆಲ್ಲಗೆ ನಕ್ಕಳು.

" ಜೋಡು ಸಿಕ್ಕಾಗ! " ಬಾಬೂ ಅಂದನು. " ಅವಳು ನಿನ್ನಂತೆ ಕೆಲಸಕ್ಕೆ ಗಟ್ಟಿಗಳಿರಬೇಕು. "

" ನಿಮಗೆ ಹೆಂಡತಿಬೇಕೋ? ಒಕ್ಕಲಗಿತ್ತಿಬೇಕೋ? " ಯಾಯಾ ಅಂದಳು.

" ಯಾಯಾ ಆಕಳು ಕೋಣ ಲಗ್ನವಾಗಲಿಕ್ಕಿಲ್ಲ. ಅಲ್ಲವೇ? "

" ಒತ್ತಾಯಕ್ಕೆ ಆದೋತಲ್ಲಾ. " ಆಕೆಯ ಉತ್ತರ.

" ಒತ್ತಾಯದ ಕಾಲ ಸರಿದು ಬಹಳ ದಿನಾ ಆದವು. ಈಗ ಒತ್ತಾಯದ ಫಲ ಹುಬ್ಬಳ್ಳಿ, ಇಲ್ಲಾದರ ಸಂಕವ್ವನ ಕೇರಿ. "

" ಒಲ್ಲಾದವನ ಜೋಡಿ ಬಾಳ್ವೆ ಮಾಡೋದಕ್ಕ ಬಂಟತನ ಬೇಕು."

" ಇಜ್ಜೋಡಿಗೆ ತಿಳುವಳಿ ಬೇಕು. "

" ವಾರಿಗೀ ಒಗೆತನಕ್ಕ ವಿದ್ಯಾ ಅಡ್ಡಯಾಕ ಬರಬೇಕು? "

" ಒಬ್ಬರು ಆಡಿದ್ದು ಇನ್ನೊಬ್ಬರಿಗೆ ಅರ್ಥ ಆಗಬೇಕಲ್ಲಾ. "

" ಅರ್ಥಮಾಡಾಕ ಪುಸ್ತಕ ನೋಡಬೇಕಾದೀತೇನು? ಅಳಾಕ ಮತ್ತು ನನಗೆ ನಮ್ಮ ಚಿಗವ್ವ ಕಲಸಲಿಲ್ಲ. "

" ಯಾಯಾ ಸುತ್ತೂ ಕಡೆ ನೋಡು. ಒಂದು ಕಪ್ಪಿಗೆ ಇನ್ನೊಂದು ಕಪ್ಪಿ ಬೇಕಾಗತದ. ಒಂದು ಕರಡಿ ಇನ್ನೊಂದು ಕರಡಿ ಬೆನ್ನಹತ್ತ್ಯದ. ಒಂದು ಗಿಳಿ ಇನ್ನೊಂದ ಗಿಳಿನ್ನ ಹುಡುಕತದ. ಇದರೊಳಗ ಅದಲಾಬದಲೀ

ಆಗೋದಿಲ್ಲ. ಮನುಷ್ಯರೊಳಗೂ ಕಪ್ಪಿ ಅವ. ಕರಡಿ ಅವ. ಗಿಳಿ ಅವ. ಆಯಾ ಪ್ರಾಣಿ ಆಯಾಪ್ರಾಣಿನ್ನ ಅರಿಸಬೇಕು."

"ಹೌದು. ಒಂದು ಕರಡಿಗೆ ಇನ್ನೊಂದು ಕರಡಿಗೆ ಗಂಟು." ಯಾಯಾ ನಕ್ಕಳು

ಯಾಯಾಳ ನಗೆಯಿಂದ ಬಾಬೂ ಪುಲಕಿತನಾದನು. ಅವನ ಮೈಯೆಲ್ಲವೂ ಈಗ ಸಂಜೀವನದಿಂದ ತುಂಬಿ ತುಳುಕುತ್ತಿತ್ತು. ಅವನು ಅವಳ ಕೈಗಳನ್ನು ಬಿಡಿಸಿ ಎದ್ದು ಕುಳಿತನು. ಎದುರಿಗೆ ಪುಲಕಿತ ನೇತ್ರೆಯಾಗಿ, ತುಂಬು ಜವ್ವನೆಯಾಗಿ, ಹಸನ್ಮುಖಿಯಾಗಿ ಯಾಯಾ ನಿಂತಿದ್ದಳು. ಬಾಬೂನ ಮನಸ್ಸು ಚಂಚಲವಾಯಿತು. ಅವನು ಅವಳ ಕೈಗಳನ್ನು ಹಿಡಿದನು. ಎದ್ದುನಿಂತನು. ಅವಳ ವಿರೋಧವನ್ನು ಲೆಕ್ಕಿಸದೆ ಅವನು ಅವಳ ತುಟಿಗಳಿಗೆ ಮುತ್ತುಕೊಟ್ಟನು.

ಅವಮಾನ, ಸಿಟ್ಟು, ಭಯ, ತಾಪ, ಸಂಕೋಚಗಳಿಂದ ಅವಳ ಮೋರೆ ಕೆಂಜಗವಾಯಿತು. ಒಂದು ಕ್ಷಣದ ಹಿಂದಿನ ದಯಾರ್ದ್ರದೇವತೆಯು ಈಗ ಭಯಾನಕಳಾದಳು. ಅವಳ ಮೈಯೆಲ್ಲವೂ ಥರಥರ ನಡುಗಹತ್ತಿತು. ಕಣ್ಣುಗಳು ಆರಕ್ತವಾಗಿ ಭೀಕರವಾದವು. ಅವಳು ಉನ್ಮತ್ತಳಂತೆ ಬಾಬೂನ ಕಡೆಗೆ ನೋಡಿದಳು. ಅವಳ ಭಂಗಿಯಿಂದ ಅವಳು ಬಾಬೂನನ್ನು ಕಡಿದು ಚಲ್ಲುವಂತೆ ಕಂಡಿತು. ತುಟಿಗಳು ರಕ್ತಹೀರಿದ ತಗಣಿಯಂತೆ ರಕ್ತರಂಜಿತವಾದವು. ಬಾಬೂ ಇದೆಲ್ಲವನ್ನು ನೋಡಿ ಭಯಭೀತನಾದನು. ಮರುಕ್ಷಣವೇ ಅವಳ ಮೋರೆಯೆಲ್ಲವೂ ನಿಸ್ತೇಜವಾಯಿತು. ಕಣ್ಣುಗಳ ಕಾಂತಿ ನೀರಪರದೆಯಿಂದ ಮಲಿನವಾಯಿತು. ತೆರೆಗಣ್ಣುಗಳನ್ನು ಅವಳು ಬಿಗಿಯಾಗಿ ಮುಚ್ಚಿದಳು. ನೀರು ದಳದಳ ಅವಳ ಕಪೋಲಗಳ ಮೇಲೆ ಉರುಳಹತ್ತಿತು.

"ಧಣೇರ ಇದನ್ನೇನು ಮಾಡಿದಿರಿ ನೀವು?" ಅವಳು ಇಳಿದನಿಯಲ್ಲಿ ಅಂದಳು.

"ಯಾಯಾ ನನ್ನನ್ನು ಕ್ಷಮಿಸು. ಆವೇಶದಲ್ಲಿ ಹೀಗೆ ಅನುಚಿತವಾಗಿ ಆಚರಿಸಿದೆ." ಬಾಬೂ ಅವಳ ಕೈಹಿಡಿದನು.

ಯಾಯಾ ಕೈ ಕೊಸರಿಕೊಳ್ಳಲಿಲ್ಲ.

" ದೇವರು ಕೂಡ ರಾಕ್ಷಸನಾಗಬಲ್ಲನೇನೋ! "

" ಯಾಕ ಈ ಕೊಂಕಮಾತು. ನನಗೆ ಪಶ್ಚಾತ್ತಾಪವಾಗಿದೆ."

" ಪಶ್ಚಾತ್ತಾಪ ಪ್ರಾಯಃಚಿತ್ತದ ಹಿಂಬಾಲಬರತೈತಿ. "

" ಅಹುದು. " ಬಾಬೂ ಅಂದನು. " ಹೇಳು ಯಾಯಾ. ಇದಕ್ಕೆ ಪ್ರಾಯಃಚಿತ್ತ ಏನು ತಕ್ಕೋಬೇಕು ಅಂತ ಅಂತೀ ? "

" ನಾ ಹೇಳಿದ ಪ್ರಾಯಃಚಿತ್ತ ನಿಮ್ಮ ಪಾಲಿಗೆ ಬೇವಿನೆಣ್ಣಿ."

" ಹೇಳು. ಯಾಯಾ ಬಿಚ್ಚಿ ಹೇಳು. "

" ಹೇಳಲಿಯಾ? "

" ಯಾಕೆ ನನ್ನನ್ನು ಪರೀಕ್ಷಿಸುವಿಯಾ? "

" ಇದು ನನ್ನ ಪರೀಕ್ಷೆಯ ಕಾಲ."

" ಹೇಳು ಹಾಗಾದರೆ."

" ಇನ್ನೊಮ್ಮೆ ಹೇಳತೀನಿ. ಈಗ ಹಸವಾಗೇತಿ ಉಣ್ಣಾಕ ಏಳ್ರಿ."

" ನೋಡಿದೆಯಾ? ಮಾತು ತಿರುಗಿಸಬೇಡ. "

" ಮಾತು ತಿರುಗಿಲ್ಲ. ಕಾಲ ತಿರಗಬೇಕಾಗೈತಿ. "

" ಅಂದರ ಏನು ? "ಬಾಬೂ ತಿಳಿಯದೆ ಕೇಳಿದನು.

ಯಾಯಾ ನಕ್ಕಳು. ಕಲತವನೂ ತನ್ನ ಮಾತು ತಿಳಿಯದೆ ಹೋದನಲ್ಲ ಎಂಬ ಒಂದು ಹೆಮ್ಮೆಯಿಂದ ಅವನ ಕಡೆಗೆ ನೋಡಿದಳು. ಅವನು ಮುಗ್ಧನಂತೆ ಅವಳನ್ನೇ ನಿರೀಕ್ಷಿಸುತ್ತಿದ್ದನು. ಅವಳು ಅವನಿಗೆ ಉತ್ತರ ಕೊಡಲಿಲ್ಲ. ತಾನು ತಂದ ಬುತ್ತಿಯನ್ನು ಹರಿದು ಹಂಚಿ ಎರಡು ಬಾಳೆಯ ಎಲೆಗಳಲ್ಲಿ ಬಡಿಸಿದಳು. ಒಂದೆರಡು ಗಡ್ಡೆಗಳನ್ನು ಕಿತ್ತಿ ಹರಿವೆಯಲ್ಲಿಯ ನೀರಿನಿಂದ ತೊಳೆದು ಅವನ್ನು ಎಲೆಗೆ ಎರಡರಂತೆ ಬಡಿಸಿದಳು. ಎದುರು ಬದುರಾಗಿ ಬಡಿಸಿದ ಎಲೆಗಳಿಗೆ ಕಂಬಳಿಯ ಆಸನವನ್ನು ಸಿದ್ಧಪಡಿಸಿದಳು. ತಂಬಿಗೆಯಲ್ಲಿ ನೀರುತುಂಬಿ ಥಾಲಿಗಳನ್ನೂ ಇಟ್ಟಳು. ಒಂದೆರಡು ಕೋತಂಬರಿಯ ಗಿಡಗಳನ್ನು ಕಿತ್ತಿತಂದು ಬಡಿಸಿದಳು. ಎಳೆಯ ಮೆಣಸಿನ

ಕಾಯಿಗಳನ್ನು ಹರಿದು ಎಲೆಗೆ ನೀಡಿದಳು. ಕೊರೆದ ಮೊಸರನ್ನು ರೊಟ್ಟಿಗಳ ಮೇಲೆ ಬಡಿಸಿದಳು. ತಾನು ಒಂದು ಎಲೆಯ ಮೇಲೆ ಕುಳಿತಳು. ಬಾಬೂನನ್ನು ಕರೆದಳು.

"ನೀನು ಹೇಳದಿದ್ದರೆ ನಾನು ಬರೋದಿಲ್ಲ." ಬಾಬೂ ಅಂದನು.

ಹಟಮಾಡುವ ಹುಡುಗನಂತೆ ಯಾಯಾನಿಗೆ ಬಾಬೂ ಕಂಡಿರಬೇಕು. ಅವಳು ಕುಳಿತಲ್ಲಿಂದ ಎದ್ದಳು. ಅವನ ಕೈಹಿಡಿದು ಎಬ್ಬಿಸಿದಳು.

"ನಂದು ತಪ್ಪಾತು. ಹೇಳತೀನಿ ಬರ್ರಿ." ಯಾಯಾ ಅಂದಳು.

ಬಾಬೂ ಆಸನದ ಮೇಲೆ ಕುಳಿತನು.

"ಇನ್ನ ತುತ್ತ ಬಾಯಾಗ ಇಡಂಶೀರೇನು?" ಯಾಯಾ ನಕ್ಕಳು.

"ಮೊದಲು ಹೇಳು."

"ಹೇಳತೀನಿ. ತುತ್ತು ತೊಗೋರಿ."

ಬಾಬೂ ಉಣ್ಣ ಹತ್ತಿದನು. ಬೇಲಿಯ ಹೊರಗೆ ತೋಟದ ಬಾಗಿಲದ ಹತ್ತಿರ ಪಿಸು ಮಾತು ಕೇಳ ಬಂತು. ಇಬ್ಬರೂ ತಿನ್ನುವದನ್ನು ಬಿಟ್ಟು ಆಲಿಸಿದರು.

"ಬ್ಯಾಡ ನಡೀಲೆ."

"ಅಟ ನೀರ ಕುಡಿದ ಬರೂಣು. ಬಾ."

"ಗುಡಿಭಾವಿಗೆ ಬಾರಲೆ. ಇಲ್ಲಿಯಾಕ."

"ಯಾಕ ಅಂಜತೀಯೇನು?"

"ಅಂಜೋದೇನಲೇ. ಏನೋ ಮಾಡತಾರು ಬಾ."

"ಯಾರವರು?" ಯಾಯಾ ಎದ್ದಳು. ಭರಭರ ನಡೆದು ತೋಟದ ಬಾಗಿಲಿಗೆ ಬಂದಳು. ಬಾಗಿಲದ ಹೊರಗೆ ಬೀದಿಯಲ್ಲಿ ಒಬ್ಬನನ್ನು ಇನ್ನೊಬ್ಬನು ಉಸುಕಿನಲ್ಲಿ ಎಳೆಯುತ್ತಿದ್ದನು.

"ಕಣದಾಗ ನಡೀಲಿ ಕುಸ್ತಿ." ಯಾಯಾ ಕೊಂಕಿದಳು.

"ಕಣದಾಗಿನ ಕುಸ್ತೀ ತಯ್ಯಾರಿ ಇದ." ಒಬ್ಬ ನುಡಿದನು.

"ಮಂದೀ ಕುಂಬೀಮ್ಯಾಲ ಏಟ ದಿನಾ ಲಗಾಟ ಹೊಡಿಯೋದು!" ಯಾಯಾ ಕುಟುಕಿದಳು.

" ಯಾಕ ಪಂಚಾತಿ. ಮುನ್ನೋಡಿ ಹೋಗು. "

" ಸೀದಾ ಹಾದೀಹಿಡದರ ಹಾದ್ಯಾಗಿನ ಹುಳ ಬಾಯಿ ಬಿಮ್ಮ ಹಿಡಿತೈತಿ. "

" ಯಾರ ಯಾಯಾ ? " ಬಾಬೂ ವಿಚಾರಿಸಿದನು.

" ಬೀದಿ ಬಿಡಾಡಿ ನಾಯಿ. "

" ಧಣೇರ ನೋಡಿದಿರಾ. ಕಾಲಕೆದರಿ ಜಗಳಾ ತಗೀತಾಳು. " ಇಬ್ಬರೂ ಒಳಗೆ ಬಂದರು.

" ಯಾರು ನೀವು ? ಏನು ಬೇಕು? "

" ಅಟ ನೀರ ಬೇಕಾಗಿದ್ದೂರಿ. ನಿಮ್ಮ ಭಾವೀ ನೀರು ಬಾಳ ಸಿವಿ. ಅಟ ಕುಡದು ಹೋಗಬೇಕು ಅಂತ ಕರೀತಿದ್ದಿನಿ. "

" ಕುಡದ ಹೋಗರಿ. " ಬಾಬೂ ಅಂದನು.

ಇಬ್ಬರೂ ಬಾವಿಯಲ್ಲಿ ಇಳಿದರು. ಯಾಯಾ ಮತ್ತೆ ತನ್ನ ಆಸನದ ಮೇಲೆ ಕುಳಿತಳು. ಅವಳ ಮೋರೆಯ ಮೇಲೆ ಅವಮಾನದ ಸೇಡು ಕುಣಿದಾಡುತ್ತಿತ್ತು, ಒಸಡಿಗಳು ಬೀಭತ್ಸರಸದ ತುಣುಕು ಮಿಣುಕುಗಳನ್ನು ರೂಪುಗೊಳಿಸುತ್ತಿದ್ದವು. ಹುಬ್ಬುಗಂಟಿಕ್ಕಿ ತ್ವೇಷದ ಛಾಯೆಯನ್ನು ಮೂಡಿಸುತ್ತಿತ್ತು.

" ಹೋಗಲಿ ಬಿಡು. ಯಾಯಾ. ನೀರಿಗೇಕೆ ಇಷ್ಟು. "

ಇಬ್ಬರೂ ನೀರು ಕುಡಿದು ಮೇಲೆ ಬಂದರು.

" ಧಣೇರ. ನೀವ ಇದ್ದಿರಂತ ನೀರು ಸಿಕ್ಕಿತು. ಇಕಿ ಇದ್ದರ ಒಂದು ಬೇವಿನ ಚಿಗರಿಗೆ ಬರಗಾಲ ನೋಡ್ರಿ. "

ಬಾಬೂ ನಕ್ಕನು.

" ನೀರ ಕುಡದಿರಲ್ಲಾ. ಇನ್ನ ಮುಕಾಟಲೇ ಹಾದೀಹಿಡೀರಿ. "

" ಹೋಗತೀವಿ ಬಿಡವಾ. ನಾವೇನ ಎದರಿಗೆ ಉಣ್ಣಾಕಕುಂತಿಲ್ಲ. "

" ಆತ ಹೋಗಪಾ ಇನ್ನ. " ಬಾಬೂ ತುಸು ಗಡಸುತನದಿಂದ ಹೇಳಬೇಕಾಯಿತು.

—ಬಾಸಿಂಗಬಲ

ಇಬ್ಬರೂ ಒಬ್ಬರೊಬ್ಬರನ್ನು ನೋಡಿ ಮಂದಸ್ಮಿತರಾಗಿ ಕಾಲುಕಿತ್ತಿ ಹೊರಗೆ ಹೋದರು.

“ ನಿನಗ ಅಂಜತಾರ್ಯಾಕ ಈ ಜನ. ” ಬಾಬೂ ಕೇಳಿದನು.

“ ಧಣೇರ. ನಿಮಗ ತಿಳಿಯಾಣಿಲ್ಲ ಬಿಡರಿ. ಈ ಬಂಟನ್ನ ನಾ ಬಲ್ಲೆ. ರಿಕಾಮಿ ತೋಟತೋಟದ ಸುತ್ತ್ತಿರಗತಾನು. ನೀರಿಗೆ ಊರ ಭಾವಿ ಇವಗ ಬರಗಾಲ ? ಹಳ್ಳದ ವರ್ತಿ ಬತ್ತಿಲ್ಲ. ಇವನ ಕಳಾ, ಶಕಲ ನನಗ ಗೊತ್ತ.... ಇರಲಿ. ಊಟಾ ಮಾಡರಿ. ”

ಬಾಬೂನಿಗೆ ಅವಳ ಮಾತು ತಿಳಿಯಿತೋ ಇಲ್ಲವೋ. ತನ್ನ ತೋಟದ ರಕ್ಷಣೆ ಅವಳಿಂದ ಚನ್ನಾಗಿ ಆಗುವದೆಂದು ಮನದಂದು ಅವನು ಆನಂದ ಪಟ್ಟನು.

---

## ೬. ನಗ್ನನಾರಿ. * * *

ಬಾಬೂ ತೋಟದ ಬಾಗಿಲು ಮುಚ್ಚಿಕೊಂಡು ಊರಿಗೆ ನಡೆದನು. ಮೂರು ಸಂಜೆಯಾಗಿತ್ತು. ಚಂದಿರನ ಕಿರಣಗಳು ಸಂಧಿ ಪ್ರಕಾಶದಲ್ಲಿ ಬೆರೆಯ ತೊಡಗಿದ್ದವು. ಸೂರ್ಯನು ಮುಳುಗಿದ್ದರೂ ಅವನ ಕಲಸಿದ ಕೆಂಪು ರಾಡಿಯು ಆಕಾಶದ ಆ ಗೋಡೆಗೆ ಮೆತ್ತಿತ್ತು. ನಡುನಡುವೆ ನೇತು ಬಿದ್ದ ಮೋಡಗಳು ಹಾರಿಬರುತ್ತಿದ್ದ ಕಿರಣಗಳನ್ನು ಬಾಯಿದೆರೆದು ಅರಗಿಸಿ ಬಿಡುತ್ತಿದ್ದವು. ಅವುಗಳ ಬದಿಗೆ ಸುರಿದ ಕಿರಣಗಳು ಜಾರಿ, ಆಗಸದಲ್ಲಿ ಬಹು ದೂರದವರೆಗೆ ತೂರಿ ಅಂತರಾಳದಲ್ಲಿ ವಿಲೀನವಾಗಿದ್ದವು. ಆಕಾಶದ ನೀಲಿ, ಎರೆ ಭೂಮಿಯ ಕಪ್ಪು, ರಾಶಿ ರಾಶಿಯೆಲೆಗಳ ದಟ್ಟಹಸಿರು, ಪಡುವಣ ದಿಕ್ಕಿನಿಂದ ನುಗ್ಗಿ ಬರುತ್ತಿದ್ದ ಸುವರ್ಣ ರೇಷೆಗಳ ಮೇಲೆ ಬೆರಳು ಕಚ್ಚು

ತ್ತಿದ್ದವು. ಆಕಾಶದಲ್ಲಿ ನಿಂತ ಚಂದ್ರನು ಸಮಯ ಸಾಧಕನಂತೆ ನಿಸ್ತೇಜನಾಗಿದ್ದನು.

ಈ ಪ್ರಫುಲ್ಲ ಪ್ರಭಾಸವನ್ನು ನೋಡಿ ಬಾಬೂ ಮುಗ್ಧನಾದನು. ಬಣ್ಣಗಳ ತೇಜಸ್ಸು ಕಣ್ಣು ಕುಕ್ಕುತ್ತಿತ್ತು. ಕಿರಣ ರಚನೆ ಭೂಮಿತಿಗೆ ಇನ್ನೊಂದು ಕುಸುರು ಕೊಡುತ್ತಿತ್ತು. ಸೂರ್ಯನ ಚಿತ್ರಗೃಹಣವು ಜಗತ್ತಿನ ವ್ಯಾಪಾರಗಳನ್ನು ಚಿತ್ರಿಸುವಂತೆ ಮನಮೋಹಕವಾಗಿತ್ತು ಆ ಸಂಜೆ.

ಬಾಬೂ ಹಾಳೆಗಳನ್ನೂ ಸೀಸಕಡ್ಡಿಯನ್ನೂ ಹೊರದೆಗೆದನು. ಹತ್ತಿರದ ದಿನ್ನೆಯೂ, ದಿನ್ನೆಯ ಮೇಲಣ ಬೇವಿನತಂಪೂ, ಹಾಸುಗಲ್ಲೂ ಬಾಬೂನ ಕಾವ್ಯರಮಣಿಯನ್ನು ಬರಮಾಡಿಕೊಳ್ಳುತ್ತಿದ್ದವು. ಬಾಬೂ ಮೆಲ್ಲನೆ ದಿನ್ನೆಯನ್ನೇರಿ, ಮೂಡಲ ನೆತ್ತರವನ್ನು ದಿಟ್ಟಿಸುತ್ತ, ಬೇವಿನದಿಂಬಿಗೆ ಆತು, ಹರಳು ಹಾಸಿಗೆಯ ಮೇಲೆ ಕಾಲುಬಿಟ್ಟು ಏಕಾಂತನಾಗಿ, ತನ್ಮಯತೆಯಲ್ಲಿ ಬರೆಯತೊಡಗಿದನು.

**ಹುಳಗಳ ಸಂತೆ.**

ದಿಟ್ಟಿಗೆ ಮುಟ್ಟಿ,
ಬಣ್ಣದ ಘಟ್ಟಿ,
ನಾಗಲೋಕದೆಡೆ ತೆರಳುತಿದೆ.
ಮುದ ಮನಮುಟ್ಟಿ,
ಮದ ಜಗಜಟ್ಟಿ,
ನೀಗಿ ಬಾಗಲೆಡೆ ಮರಳುತಿದೆ. ೧

ಸುಂದರ ಬಾಣ
ಹೊಂದಿದ ಪ್ರಾಣ
ಮೂಡು ಮೋಡದೆಡೆ ಕುಸಿಯುತಿದೆ.
ಆರಿ ಹಾರಿ ಮನ
ವಾರೆ ಸೇರಿ ಜನ
ಕಾಡುಬೇಗೆಯೆಡೆ ಕುದಿಯುತಿದೆ. ೨

— ಬಾಸಿಂಗಬಲ

ಗಗನ ನೂಡುವಿಧ
ಜಗದ ಬಯಕೆ ಕದ
ಶಿವಿದು ತೆರೆದು ಮೈಗೊಳ್ಳುತಿದೆ.
ರಾಶಿ ರಾಶಿ ಜನ
ಹೇಸಿ ಹೋರುಮನೆ
ನವೆದು ಬರಿದು ಮೈ ಜೊಳ್ಳುತಿದೆ. ೩

ಬಿರುದಿಗೊಂದು ಬಾ
ಹುಲಿಯು ನಿಟ್ಟು ಗಡ
ಬಯಲು ಬಯಲಿಗದು ಬಂಗಾರ.
ಹಣೆಗೆ ಕುಂಕುಮವು
ಹಣಕೆ ಬಿಡುಗಡೆಯು
ಕುಕ್ಕು ಚುಕ್ಕೆಗಳ ಶೃಂಗಾರ. ೪

ನಾರೀರತ್ನದ
ಬಲಗೈ ಬೆರಳಿಗೆ
ಹಚ್ಚೇ ಬಟ್ಟನು ಇಡುತಲಿದೆ.
ವಾರೀ ರತ್ನದ
ನೆತ್ತಿಯ ಕುಕ್ಕಿ
ಬಂಧನ ಬೇಡಿಯ ಬಿಗಿಯುತಿದೆ. ೫

ಕವನವನ್ನು ಇನ್ನೊಮ್ಮೆ ಓದಿ ಬಾಬೂ ಹೊರಡಲು ಅನುವಾದನು. ಚಂದ್ರನ ಹಾಲು ಸುತ್ತಲೂ ದಟ್ಟವಾಗುತ್ತಿತ್ತು. ಬಾಬೂ ಎದ್ದನು. ಸಮೀಪ ದಲ್ಲಿಯೇ ಬಳೆಯ ಸಪ್ಪಳವಾಯಿತು. ಸಪ್ಪಳದ ಬೆನ್ನ ಹಿಂದೆಯೇ ಗುರುತಿನ ಮಂದಹಾಸವು ಕಿವಿಗೆ ಎರಚಿತು. ಬಾಬೂ ಲಗುಬಗೆಯಿಂದ ಕಾಗದ ಮತ್ತು ಬರೆಗಾರವನ್ನು ಜೇಬಿನಲ್ಲಿ ತುರುಕಿ ಮಂದಹಾಸ ಬೀರಿದ ಎಡೆಗೆ ಸುಹಾಸ ಬೀರಿದನು. ಯಾಯಾ ಗಿಡದ ಹೊರಗೆ ಬಂದು ಬಾಬೂನ ಎದುರು

ನಿಂತಳು. ಅವಳ ಅವ್ಯಕ್ತಮಯ ಠೀವಿಯನ್ನು ನೋಡಿ ಬಾಬೂ ನಗುವಾಗ ದುಂಬಿದನು. ಅವಳ ಪತ್ತಲದ ಗುಲಾಬಿ, ಕುಪ್ಪಸದ ನೀಲಿ, ಸಕಲವರ್ಣಗಳನ್ನು ಕುದುರಿಸುವ ಚಂದ್ರನ ಮರೀಚಿ ಕಣ್ಣಿನ ಗೋಲಕಗಳ ಸಿಡಿಮುದ್ದುಗಳ ಚದುರಂಗವು ಅವನಿಗೆ ಮನೋಹರವಾಗಿ ಕಂಡಿತು. ಶೀತಲವಾದ ತಂಗಾಳಿ, ಶೀತಲವಾದ ಮುಚ್ಚಂಜೆ, ಶೀತಲವಾದ ಜಗತ್ಪಾದಗಳ ಕುಂಡದಲ್ಲಿ ಅವೆರಡು ಜೀವಿಗಳ ಮನಸ್ಸು ಮಾತ್ರ ಹೃದಯದ ಅಂತಃಸ್ಪಂದನದ ಕಾವಿನಿಂದ ಚೇತರಿಸುತ್ತಿದ್ದವು.

"ಯಾಯಾ ತಡವಾಯಿತು. ಹೋಗೋಣ ನಡೆ." ಬಾಬೂ ಮಾತು ಮೂಡಿಸಿದನು

"ಇಷ್ಟು ಗಡಾನ ?"

"ನೆತ್ತಿಯ ಬಿಂಬ ಚಂದ್ರನದು, ಸೂರ್ಯನದಲ್ಲ." ಬಾಬೂ ಅಂದನು.

"ಹೌಂದು. ಬರಿಯಾಕ ಬೆಳಕ ಬಿಟ್ಟರ ಸಾಕು. ಯಾ ಬಿಂಬ ಏನು?"

"ಯಾಯಾ ಹೀಗ ಕಳ್ಳತನ ಮಾಡಲಿಕ್ಕೆ ಕಲಿತು ಎಷ್ಟು ದಿನಾ ಆಯಿತು ?"

"ಕಾವಲಕ್ಕ ನಿಂತಾಗಿನಿಂದ."

ಬಾಬೂ ನಕ್ಕನು. ಅವಳ ಮಾತಿನ ಹೊಲಬು ತಿಳಿದು ಮತ್ತೆ ನಕ್ಕನು.

"ಯಾಯಾ ಬರೋದಿಲ್ಲೇನು ? ಹೊತ್ತಾಯಿತು."

"ಬರದ್ದು ಆಟ ತೋರಿಸಿರಲ್ಲ."

"ನಿನಗೇನ ತಿಳೀತದ ?"

"ಹಾಂಗಾರ ತಿಳಿದವರು ಓದ್ರೀ."

"ನನ್ನ ಧ್ವನಿ ಸರಿಯಿಲ್ಲ."

"ಹಾಂಗಾರ ನನಗ ಕೊಡಿರಿ, ನಾ ಓದತೀನಿ."

ಬಾಬೂ ಹಾಳೆಯ ಮುದ್ದೆಯನ್ನು ಅವಳ ಕೈಗಿತ್ತನು. ಯಾಯಾ ಹಾಳೆಗಳನ್ನು ಹೊಂದಿಸಿ ಎಲ್ಲ ಸಾಲುಗಳ ಮೇಲೆ ಒಮ್ಮೆ ಕಣ್ಣುಗಳನ್ನೆಳೆದಳು. ಮನಸ್ಸಿನಲ್ಲಿಯೇ ಗುಣುಗುಣಿಸಿದಳು. ಒಂದೆರಡು ಸಾಲು ಎತ್ತರಿಸಿ

ಹಾಡಿದಳು. ಧನಿ ಸರಿಪಡಿಸಿಕೊಂಡು ಸರಾಗವಾಗಿ ಹಾಡ ಹತ್ತಿದಳು. ಒಂದೊಂದು ಸಾಲಿನಲ್ಲಿ ರಸದ ಪಾಕ ಸುರುವಿ, ಧ್ವನಿಯ ಬುಗ್ಗೆ ಬಸಿದು, ಅವಳ ಹಾಡುಗಾರಿಕೆ ಪ್ರಶಾಂತ ಗಂಭೀರವಾತಾವರಣದಲ್ಲಿ ಗಂಭೀರತೆಯನ್ನೂ ಬಾಬೂನ ಮನಸ್ಸಿಗೆ ಆತ್ಮಾನಂದವನ್ನೂ ತಂದುಕೊಟ್ಟವು. ಬಲವಂತಿನ ಗಡಸು ಧನಿ ಯಾಯಾನ ಮಂಜುಲ ನಿನದ ಅವನಿಗೆ ಗುಡುಗು ಜೇರುಂಡೆಗಳಂತೆ ಕಂಡವು. ಅವನು ತನ್ಮಯತೆಯಿಂದ ಕೇಳಿದನು. ಬದಿಯಲ್ಲಿ ಯಾಯಾ, ಸುತ್ತಲೂ ಪ್ರಶಾಂತಸಮಯ, ಶೀತಲವಾಗಿ ಸುರಿಯುತ್ತಿರುವ ಚಂದ್ರನ ಕಿರಣಗಳು, ಯಾಯಾನ ಸ್ವರವನ್ನು ಹಾಳಿ ಹಾಳಿಯಾಗಿ ತೇಲಿಸುತ್ತಿರುವ ಸಮೀರಣಯಂತ್ರ ಅವನನ್ನು ಸೆರೆ ಹಿಡಿದವು.

“ ಕಿಗ್ಗಳ ಕವಿತೆಯನ್ನು ಕೂಡ ಕೋಕಿಲ ಕಂಠ ಕಾವ್ಯ ಮಾಡಬಹುದಲ್ಲ ! ” ಬಾಬೂ ಅಂದನು.

“ ಇದರಾಗ ಕಾವ್ಯ ದೊಡ್ಡದೋ, ಕೊರಳು ದೊಡ್ಡದೋ ? ” ಯಾಯಾ ಕೆಣಕಿದಳು.

“ ಬಲಬೇಶಿ ! ಬಲಬೇಶಿ !! ” ದೂರದಲ್ಲಿ ನಗೆಯ ಧ್ವನಿ ಅಕಸ್ಮಾತ್ ಕೇಳಿಸಿತು.

“ ಯಾವವಾ ಜೋಕಮಾರ ! ” ಯಾಯಾ ಸಿಡಿನುಡಿದಳು.

ನಗೆಯು ತಟಕ್ಕನೆ ನಿಂತಿತು. ಎರಡು ಧ್ವನಿಗಳು ಬಿರುಸಾಗಿ ನಡೆಯುತ್ತ ಅವರ ಕುಳಿತ ಕಡೆಗೆ ಪ್ರವಾಸ ಮಾಡಿದವು. ದೂರಿನಿಂದಲೇ ಯಾಯಾ ಅವರನ್ನು ಗುರುತಿಸಿದಳು. ಬೆಳಗಿನಲ್ಲಿ ತೋಟದ ಎದುರು ಉಸುಕಿನಲ್ಲಿ ಎಳೆದಾಡುತ್ತಿರುವ ವ್ಯಕ್ತಿಗಳು.

“ ಬೀದಿ ಬಿಡಾಡಿ ನಾಯಿ ! ” ಯಾಯಾ ಕುಟುಕಿದಳು.

“ಕಾಲಕೆದರಿ ಜಗಳಾ ತೆಗೀಬೇಕಾಗೇತೇನ. ಅವರಲ್ಲಿಯ ಹಿರಿಯ ನುಡಿದನು.”

“ಮುಕಾಟಲೇ ಹಾದೀಹಿಡಿ.”

“ನೈನದಾಗ ಹಾಡಿದರ ಕೇಳವರು ಬಾಳಮಂದಿ.”

“ಹೌಂದು, ಘುಗಸೆಟ್ಟಿ ಸೈ ಅನ್ನಾಕ ರೊಕ್ಕ ಬೀಳಾಣಿಲ್ಲಾ.”

"ಮನೀಬಾಗಿಲಿಗೆ ಕೀಲಿಬಿಗಿದು, ಕಿಡಿಕಿಗೆ ಕೌದೀಇಳವಿ, ಜೇರ ಗಿಂಡಿಗೆ ಡಬಾಸ ಹೊಚ್ಚಿ ಸಂಗೀತ ಸಾಗಬೇಕು ಎಡ್ಡನೇದವು ಕೇಳ ಬಾರದಂದ್ರ."

"ಗಾಂವಠಾಣಾದಾಗ ಎಲ್ಲಾರದೂ ಹಕ್ಕ ಐತಿ."

"ನೀ ಹಕ್ಕ ನಡಸು. ನನ್ನ ದಾರಿಗೆ ಬರಬ್ಯಾಡ. ಆತ."

"ಯಾಕ್ಕ? ಏನ ಮಾಡಾವ ಅದೀ ನೀ?"

"ಏನ ಮಾಡಾವ ಅದೀ....? ಬಾಬೂರಾಯರ!"

"ಅಲ್ಲಪಾ ನೀ ಇಲ್ಲೀದ ಹೋಗತೀಯೊ ಇಲೋ?"...ಬಾಬು ಅಂದು.

"ನಿಮ್ಮ ತೋಟದಾಗ ನಾ ಇಲ್ರೀ ಈಗ."

ಬಾಬೂ ಎದ್ದನು. ಒಂದೆ ಹಾರಿಕೆಗೆ ಅವನ ಮೇಲೆ ಕುಸಿದು ಅವನ ರಟ್ಟೆಯನ್ನು ಹಿಡಿದನು. ಅವನ ಸಂಗಡಿಗನು ಅವನನ್ನು ಸೆಳೆಯುತ್ತ-

"ನಡೀಲೇ...ಈದಿನ ಸೆರಿಗಿರಿ ಕುಡದ್ದಿ ಏನ? ಎಂದು ಎಳೆದನು."

"ಬಿಡಲೇ...ಒಂದ ಕೈ ನೋಡೇ ಬಿಡತೀನಿ."

ಸಂಗಡಿಗನು ಅವನ ಕೈಬಿಡಲಿಲ್ಲ. ಹಾಗೆಯೇ ಎಳೆಯುತ್ತ ಮುಗ್ಗರಿಸುತ್ತ ಅವನನ್ನು ಮುಂದೆ ಸಾಗಿಸಿಕೊಂಡು ಹೋದನು.

ಅವರು ಹೊರಟು ಹೋದಮೇಲೆ ಬಹಳ ಹೊತ್ತಿನ ವರೆಗೆ ಇಬ್ಬರೂ ಮಾತಾಡಲಿಲ್ಲ. ಪಕ್ವಾನ್ನವನ್ನು ಬಡಿಸಿಟ್ಟಾಗ ಹಡಪಹತ್ತಿದ ನಾಯಿಯು ಬಾಯಿಹಾಕಿ ಹಸಿವಿಗೆ ಹೇಸಿಕೆಯನ್ನು ತರಿಸುವಂತೆ ಆಗಿನ ಅವರ ಮನಃಸ್ಥಿತಿಯಾಗಿತ್ತು. ಬಾಬೂ ಎದ್ದನು.

"ಏಳು ಯಾಯಾ ಹೋಗೋಣ" ಎಂದನು.

ಯಾಯಾ ನಿಧಾನವಾಗಿ ಎದ್ದಳು. ಇಬ್ಬರೂ ಮೆಲ್ಲಗೆ ನಡೆಯುತ್ತ ದಾರಿಗೆ ಬಂದರು. ದಾರಿಯು ಸಾಗುತ್ತಲಿತ್ತು. ಕಾಲಿನ ಧೂಲಿಯು ಮೂಗಿಗೆ ಅಂಟಿದರೂ ಇಬ್ಬರಿಗೂ ಅರಿವಾಗಲಿಲ್ಲ. ಜಾಲಿಯಮುಳ್ಳು ಮೈಗೆ ತರೆದರೂ ಅವರಿಗೆ ಚುರುಕು ಹತ್ತಲಿಲ್ಲ. ಬೆಣಚಿಕಲ್ಲಿಗೆ ಬೆರಳುಗಳು ಮಡಚಿದರೂ ನೋವಿನ ವಿಚಾರ ಅವರಿಗೆ ಬರಲಿಲ್ಲ. ಸಮೀಪದಲ್ಲಿ ಹನು

—ಬಾಸಿಂಗಬಲ

ಮಪ್ಪನ ಗುಡಿಯು ಕಾಣುತ್ತಿದ್ದಿತು. ಸುತ್ತಲೂ ವಸತಿಗೆ ಬಂದ ನಾಲ್ಕಾರು ಚಕ್ಕಡಿಗಳು ಅರಳೀಕಟ್ಟೆಯ ಹತ್ತಿರ ಬೀಡು ಬಿಟ್ಟಿದ್ದವು. ಬಾಬು ಬಾಯ ಬೀಗ ಬಿಚ್ಚಿದನು.

"ಯಾಯಾ ಇವನು ಯಾರು?"

"ಲೋಕಾಪುರದ ಗೌಡ. ಹತ್ತಕೂರಿಗಿ ಜಮೀನ ಐತೆಂತ ಬಲೀ ಹುಟ್ಟಂಗಿ ಬಡೀತೈತಿ."

"ಇಲ್ಲಿ ಯಾಕ ಬಂದಾನ?"

"ಯಾಂಬಲ್ಲ. ಮನಿ ನೆಂಬಿ ಇದ್ದರ ಒತ್ತಟ್ಟಿಗೆ ಇದ್ದೀತು."

"ನಿನ್ನ ಮ್ಯಾಲ ಇಷ್ಟ ರೋಷ ಯಾಕ?"

"ಚಿಗವ್ವಗ ಬೇಡಿದಂತ ಇವ."

"ಏನು?"

"ನನ್ನ "

"ಯಾತಕ್ಕ?"

"ನನ್ನ ಜೋಡಿ ಕಂತು ಬಾಸಿಂಗ ಬಿಗೀಕಿದ್ದಂತ, ಇವ ಚಲುವ?"

"ಇವನಿಗೆ ಏನು ಆಗೇದ? ಚಲುವ ಇದ್ದಾನಲ್ಲಾ."

"ಹೋಂದು. ಚಲುವ ಅದಾನು. ಚಲುವತನದ ಯಾಪಾರ ನಡಿಸ್ಯಾನು."

"ನೀನು ಇವನಿಗೆ ಏನು ಮಾಡುವವಳಿದ್ದೀ?"

"ನಾ ಏನ ಮಾಡಲಿ? ಮಾಡಿಕೊಂಡ ಹೇಣತಿ ಎದಿ ಒಡದು ಬಾವೀ ಬಿದ್ದಳು."

"ಇವನ ಮದುವೆ ಆಗಿತ್ತು?"

"ಉಡಕಿ ಆಗಿತ್ತು."

"ಮನುಷ್ಯ ಸರಳ ಅಲ್ಲ?"

"ಘಟಿಂಗ."

"ಮತ್ತು ಇಂಥವರದೇ ಜಗತ್ತು "

“ದುಡ್ಡು ಚಲುವತನ ಏರಫೇರ ಇರೋಮಟ, ಸೂರ್ಯಾ ಮುಣುಗು ವಲ್ಲೆ, ಮೂಡೂವಲ್ಲೆ ಹೀಗ ನಡಿಯೋದ.”

“ಹಾಗಾದರ ಏನು ಮಾಡೋದು?”

“ಐತಿ, ಐತಿ, ಬಾಳ ಐತಿ. ಮಾಡೋದು.”

“ಏನು ಮಾಡಬೇಕು ಹೇಳು?”

“ಧಣೇರ ನೀವು ಕಲತದ್ದು ಬಕ್ಕಬಾರ ಬೀಳಲಿ. ನೋಡಿರಿ.... ಅಲ್ಲಾ ನೀವೇನೋ ಸೊರಾಜ ಸೊರಾಜ ಅಂತ ಅಂತೀರಲ್ಲಾ ನನಗ ಅನಸತೈತಿ. ದೇಶದಾಗಿನ ಘಟಿಂಗತನವೊದಲ ಓಡಸರಿ, ಸೊರಾಜ ಓಡಿ ಬರತೈತಿ.”

“ನಿನ್ನ ಕೈಯೂ ಕಾಲೂ ಕಟ್ಟಿದರ ಏನ ಮಾಡತೀ ಯಾಯಾ ನೀನು ?”

“ಹೋಕೋತೀನಿ. ಚಿವರತೀನಿ. ಕಡೀತೀನಿ.”

“ಹಾಗ ನಡದದ ನಿನ್ನ ಮಾತು.”

“ಇದನ್ನ ಬಿಡರಿ ಧಣೇರ. ನೀವು ಸುಧಾರಣಾ ಸುಧಾರಣಾ ಅಂತ ಅಂತೀರಿ. ಸುಧಾರಣಕ್ಕ ಸೆರಿಮನಿಗೆ ಯಾಕ ಓಡಬೇಕು ? ಇದ ಊರಾಗ ನೂರಮಂದಿಗೆ ನಾ ಕೆಲಸಾ ಕೊಡತೀನಿ.”

“ಏನ ಕೆಲಸಾ ಕೊಡತೀ ?”

“ಧಣೇರ ಊರಸುತ್ತ ನೋಡಿರಿ. ಹೊಲಾ ಪಡಾ ಏಟ ಬಿದ್ದೈತಿ. ವರ್ಷಾ ರೋಗ ಹಾದ ಪೈರೂ, ದನಾ ಏಟ ಹಾಳಾಗತೈತಿ. ನೀರಿನ ಅರಬ ಈ ಊರಾಗ ಏಟ ಐತಿ. ನನಗ ಅನಸತೈತಿ. ನಮ್ಮ ಊರಿಗಿ ಬಾವೀ ಕಡ ಸಾಕ ಮನಸ್ಯಾಗ ಒಂದೊಂದು ಸಾವಿರ ರೂಪಾಯಿ ಕೊಡಲಿ, ನಮ್ಮ ಊರ ಬನಾ ಆಗತೈತಿ. ಹನುಮಂತಪ್ಪ ಹೂವಿನಾಗಿನ ಚಿಣಗೀ ಹಾವು ಆಗತಾನು. ಅವನ ಸುತ್ತ ಕ್ಯಾದಿಗೀ ಹೋಡಿವಾಸ, ಪಲ್ಲೇದ ಕಂಪಾ, ಎಲಿ ಬಳ್ಳೀ ತೋಟ, ತೆಂಗು ಅಡಿಕೆ ಬಾಳಿ, ಕಬ್ಬು....ಹದಿನೆಂಟು ದೀನಸು ಹನುಮಪ್ಪನ್ನ ನೋಡಿ ಹರಸ ತಾವು.”

“ಅಹುದು. ಖರೇ ಅದ.”

— ಬಾಸಿಂಗಬಲ

" ಅದಕ್ಕ ಅಂತೀನಿ.........ನನಗ ನಾಳೆ ಒಂದು ಲಂಬರ ಮಾಡಿರಿ.... ಒಂದು ಕೈನೋಡಿ ಬಿಡತೀನಿ.......'' ಯಾಯಾ ಹೆಮ್ಮೆಯಿಂದ ನಕ್ಕಳು.

" ನಿನಗ ಲಂಬರ ಸಾಲೋದಿಲ್ಲ....ಪಟ್ಟಕ್ಕ ಕೂಡಸಬೇಕು. "

" ಹೌಂದ ಹೌಂದ....'' ಯಾಯಾ ಒಯ್ಯಾರದಿಂದ ಅಂದಳು.

" ಮತ್ತ ಕೈಯಾಗ ಒಂದು ಬಾರಕೋಲು ಕೊಡಬೇಕು. "

" ಆ ವ್ಯಾಲ ? " ಯಾಯಾ ತಿಳಿಯದೆ ಕೇಳಿದಳು.

" ಸಿಕ್ಕವರ ಬೆನ್ನಿಗೆ ಬಾಸಾಳು. ''

ಅರ್ಥ ತಿಳಿಯದೆ ಯಾಯಾ ಬಾಬೂನ ಮುಖವನ್ನು ನೋಡಿದಳು. ಮೋರೆ ನೋಡಿ ಅರ್ಥವಾಗಿ ನಕ್ಕಳು. ಅವಳು ಉತ್ತರ ಕೊಡಲಿಲ್ಲ. ಮಾತಿನ ಭರದಲ್ಲಿ ಅವರು ಹನುಮಂತ ದೇವರ ಗುಡಿಯ ಸಮೀಪಕ್ಕೆ ಬಂದಿದ್ದರು. ಗುಡಿಯ ಹೊರಮುಗ್ಗಲು, ಒಂದೆರಡು ಒಲೆಗಳು ಉರಿಯುತ್ತಿದ್ದವು. ವಸತಿ ಮಾಡಿದ ಒಕ್ಕಲರು ತಮ್ಮ ಬೇಳೆ ಬೇಯಿಸುತ್ತಿದ್ದರು. ಚಂದ್ರನ ಕಿರಣಗಳು ಅಸ್ಪಷ್ಟವಾಗಿ ಅವರ ಕೃತಿಗಳಿಗೆ ಬೆಳಕು ತೋರಿಸುತ್ತಿದ್ದವು. ನೊಗಕ್ಕೆ ಕಟ್ಟಿದ ದನಗಳು ಮೇವು ಜಗಿಯುತ್ತ ಕೊರಳು ಕೊಂಕಿಸಿ ಗಂಟೆನಾದ ಮಾಡುತ್ತಿದ್ದವು. ಬಂಡಿಗರ ಮಕ್ಕಳು ಗಾಡಿಯನ್ನೇ ನಡುಮನೆ ಮಾಡಿ ಕೋಲಾಟವಾಡುತ್ತಿದ್ದರು. ಚಿಲುಮೆಯ ದಾಸರು ಚಿಲುಮೆ ಹೊತ್ತಿಸಿ ಹೊಗೆಯ ಖಾಟಕ್ಕೆ ಕೆಮ್ಮುತ್ತಿದ್ದರು. ಗುರುತುಸಿಗದ ನಾಯಿಗಳು ಭೊಗಳಿ, ಯಜಮಾನನ ಮನೆಯ ಕೂಳು ತಿಂದದ್ದಕ್ಕೆ ಕೃತಜ್ಞತೆ ತೋಡಿ ಕೊಳ್ಳುತ್ತಿದ್ದವು. ಕತ್ತೆಯು ತನ್ನ ಬುದ್ಧಿಮತ್ತೆಯ ಪ್ರದರ್ಶನಕ್ಕೆ ಅಗಂತ್ಯ ಕವಾಗಿ ಒದರುತ್ತಿತ್ತು. " ಫಿರ್‌ಫರ್ '' ಎಂದು ಕುತ್ರೆಸರು ಬಡುವ ಗಿರಣಿ ಬೀಸುವ ರೊಕ್ಕವನ್ನು ಕೇಳುತ್ತಿತ್ತು.

ಇಬ್ಬರೂ ಗುಡಿಯ ಬಾಗಿಲಿಗೆ ಬಂದರು. ಗಾಡಿಯ ಜನರು ಊರ ಉಸಾಬರಿಯನ್ನು ಮಾಡುತ್ತಿದ್ದರು. ಬಾಬೂ ಅವರ ಹರಟೆಯನ್ನು ಕೇಳುವ ಮನಸ್ಸಿರಲಿಲ್ಲ. ಆದರೆ ಹರಟೆಯ ಪ್ರವಾಹವು ತನ್ನ ತೋಟದತ್ತ ಹರಿದುದ ರಿಂದ ಅವನು ನಿಂತು ಕೇಳಲೇ ಬೇಕಾಯಿತು. ಯಾಯಾನೂ ನಿಂತು ಆಲಿಸಿದಳು.

" ನಾವೂ ತೋಟಾ ಮಾಡಬೇಕು ನೋಡೋ. " ಒಬ್ಬನೆಂದನು.

" ವರ್ಷಕ್ಕ ನಾಲ್ಕೆತ್ತಿನ ಬೇಜಮಿಮಾಡ್ರ ."

" ಲೇ ಬಿಡೋ...ಒಂದು ಸರತಿಗೆ ನಾನೂರು ರೂಪಾಯಿ ಪದರಿಗೆ ಬೀಳತಾವು ಈ ದಿನಾ ನೋಡೀದಿಲ್ಲೋ ಗೋಕಾವ್ಯಾಗ ?..."

" ಏನಾ? "

" ಇದ ಊರಾವಂತಲಾ....ಚನ್ನೋ....ಚಿನ್ನೋ.... ಹತ್ತಬುಟ್ಟಿ ಪಲ್ಲೇಕ ರೊಕ್ಕ ಸೂರಿಮಾಡಿದಾ. ....ಎಡ್ಡನೂರರ ಸನೇಕ ಆದರೂ ಆಗಿರ ಬೇಕು ರೊಕ್ಕ."

" ಹಾಂಗ ಆಗೋದು....ಆಸಿಗ್ಗೊವ್ಕ್ ಬ್ಯಾಸಿಗ್ಗೊವ್ಕ್. "

" ಕೆಲಸಾಮಾಡಾವಗ ಯಾ ಹೋರೆ ಏನ ತೊಗೋಳಲೇ ..." ಮೂರನೇಯವನೆಂದ.

" ಹೋರೆ ಹೋರೇ ಅಂತ ಹಡಪದವ ಆಗತೀ ಏನಲೇ? "

" ಆದೂ ಬೇಸಿ ಬಿಡ....ಪ್ಯಾಟ್ಯಾಗ ತೆಲೀಮಾಡಸಾಕ ಹೋದರ ಪಾಳಿ ಹಚ್ಚಿ ಕುಂಡರಬೇಕಾಗತೈತಿ...."

" ನೀ ದಾಡೀ ಮಾಡಾಕ ಹೋಗಿ ನಾಲ್ಕ ಮಂದಿ ಕೊಳ್ಳ ಕೊಯ್ಯಾವ ಬಿಡ. ...."

ಎಲ್ಲರೂ ನಕ್ಕರು. ಹಡಪದ ವಿಚಾರದವ ಉತ್ತರವೀಯಲಿಲ್ಲ. ನಗೆಯು ಬುಗ್ಗೆ ಬಸಿದರೂ ಮಾತು ಬೇರೆಯೆಡೆ ಹೊರಟಿತು. ಅದು ಅವ ರಿಗೆ ಸಂಬಂಧಿಸದಿದ್ದುದರಿಂದ ಹೆಜ್ಜೆ ಹಾಕಿದರು. ಆ ಹರಟೆಯನ್ನು ಕೇಳಿ ಬಾಬೂ ನಕ್ಕನು. ಬಾಬೂನ ನಗೆಯಲ್ಲಿ ಯಾಯಾ ತನ್ನ ಹೆಮ್ಮೆಯನ್ನು ಕಂಡುಕೊಂಡಳು.

" ಯಾಯಾ ಇದೆಲ್ಲ ನಿನ್ನದು ನೋಡು ಕಸರತ್ತ." ಬಾಬೂ ಅಂದನು.

" ಧಣೇರ ರೊಕ್ಕ ಹೊರಿಗೆ ಹೊರಿ ಬಂತು ಖರೆ....ಆದರ ಚನ್ನ ಏಟ ಕೈಗೆ ಹಚ್ಚತಾನೋ ಯಾಂಬಲ್ಲ. "

---

—ಬಾಸಿಂಗಬಲ

" ಹೌದು ಯಾಯಾ ಅದೂ ಖರೇನ "

ಇಬ್ಬರ ಹಾದಿಗಳೂ ಒಡೆದವು.

" ಲೀ... " ಯಾಯಾ ಅಂದಳು. " ಧಣೇರ ನಿಮ್ಮದೊಂದು ಟಪಾಲು ಬಂದಿತ್ತರಿ. ನೆಪ್ಪ ಆಗಲಿಲ್ಲ. ಹಿಡೀರಿ. " ಎಂದು ಕುಪ್ಪಸದ ಒಳಗೆ ಬೈತಿಟ್ಟ ಒಂದು ಕಾರ್ಡನ್ನು ಹರಿದು ಅವಳು ಕೊಟ್ಟಳು. ಬಾಬೂ ಕೈಯಲ್ಲಿ ಹಿಡಿದು ಅದರ ಮೇಲೆಲ್ಲವೂ ಕಣ್ಣುಗಳನ್ನು ಆಡಿಸಿದನು. ಚಂದ್ರನ ಬೆಳಕು ಅಕ್ಷರಗಳ ಬಣ್ಣವನ್ನು ಚೊಕ್ಕಟವಾಗಿ ಮೂಡಿಸಲಿಲ್ಲ. ನಿಸ್ತೇಜವಾದ ಕಣ್ಣುಗಳು ಸ್ವಯಂಶಕ್ತಿಯಿಂದ ಅರ್ಥಗ್ರಹಿಸಲಿಲ್ಲ. ಬಾಬೂ ಹೊರಳಿ ಹೊರಟನು.

" ಏನ ಏತರ ಸುದ್ದೀ? " ಯಾಯಾ ಕೇಳಿದಳು.

" ಕಾಣಿಸಲೊಲ್ಲದು. ಮನೆಗೆ ಬಾ... ನೋಡೋಣ. "

ಇಬ್ಬರೂ ಬಾಬೂನ ಮನೆಗೆ ಹೋದರು. ಬಾಬೂ ದೀಪ ಹಚ್ಚಿದನು. ಆಸನದ ಮೇಲೆ ಕುಳಿತನು. ಯಾಯಾ ಕಟ್ಟೆಗೆ ಕಾಲು ಇಳಿಬಿಟ್ಟು ಕುಳಿತಳು. ಬಾಬೂ ಪತ್ರವನ್ನು ಮನಸ್ಸಿನಲ್ಲಿಯೇ ಓದಿದನು. ಓದುವದಾದ ಮೇಲೆ ಅದನ್ನು ಯಾಯಾನ ಕಡೆಗೆ ಒಗೆದನು. ದೀಪವನ್ನು ಸರಿಸಿದನು. ಯಾಯಾ ಕಾಲು ಎತ್ತಿ ಕಟ್ಟೆಯ ಮೇಲೆ ಸರಿಯಾಗಿ ಕುಳಿತಳು. ಪತ್ರವನ್ನು ಎತ್ತಿ ಓದಹತ್ತಿದಳು. ಓದುವದಾದ ಮೇಲೆ ಪತ್ರವನ್ನು ಬಾಬೂನಿಗೆ ತಿರುಗಿ ಕೊಟ್ಟಳು. ಇಬ್ಬರ ಬಾಯಿಂದಲೂ ಮಾತು ಹೊರಡಲಿಲ್ಲ. ಆತ್ಮಪರೀಕ್ಷಣದ ತನ್ಮಯತೆಯಲ್ಲಿ ಒಂದು ಕ್ಷಣಹೊತ್ತು ತಮ್ಮನ್ನೇ ಮರೆತರು. ಪುರಾಣದ ಚಿತ್ರಗಳು ಅವರಿಬ್ಬರ ಕಣ್ಣುಮುಂದೆ ಹಾದು ಒಂದ್ಯ ಕ್ಷಣ, ನಗೆ, ಗೆಲುವು, ಆನಂದ, ತೃಪ್ತಿ ಅಭಿಮಾನ, ಹೆಮ್ಮೆ, ಮುನಿಸುಗಳ ವಿವಿಧ ರಂಗಗಳನ್ನು ಚಿತ್ರಿಸಿ ಕಣ್ಣಿನ ಆಭಾಸವನ್ನು ನಿಜರಂಗಕ್ಕೆಳೆಯುತ್ತಿದ್ದವು. ಚಿತ್ರಾವಳಿಯ ಕೊನೆಗೆ ಅಗಲ್ಕೆಯ ವಿಕಟ ಹಾಸ ಇಬ್ಬರನ್ನೂ ಬಧಿರರನ್ನಾಗಿ ಮಾಡಿತು. ಕಣ್ಣು ತೆರೆದಾಗ ಕಂಡದ್ದು ಕಣ್ಣುಮುಚ್ಚಿದಾಗ ವಿಕೃತರೂಪ ತಾಳಿತು. ಸತ್ಯಸಂಗತಿಯನ್ನು ವಿಮರ್ಶಿಸಿ ನೋಡಿದಾಗ ಬಂದ ಭಯ ರುದ್ರರಸಕ್ಕಿಳಿವ ಗುರುತು ತಾಳಿತು. ವಿವರ್ಣವಾದಾಗ

ಹೊರಟ ಧನಿ ಸಪ್ಪಗಾಗಿ, ಮೆತ್ತಗಾಗಿ ಯಾಯಾನ ನಾಲಿಗೆಯಿಂದ ಮಾತು ಗಳನ್ನು ಹೊರಡಿಸಿತು.

" ಎಂದ ಹೊರಡತೀರಿ ಬೆಳಗಾವಿಗೆ ? "

" ನೋಡಬೇಕು. ಇಂದೇ ಹೋಗುವ ಕಾರಣವಿಲ್ಲ ಒಂದೆಡು ವಾರದೊಳಗೆ ತಳ ಕೀಳಬೇಕು. "

" ಧಣೇರ ಹಾಗಾರ ನಾನೂ ಅಪ್ಪು ಊರಿಗೆ ಹೋಗಿ ಬರತೀನಿ.... ಈಗ ತೋಟದೊಳಗ ಬದುಕು ಕಡಿಮೆ ಐತಿ...ಇಬ್ಬರೂ ನೋಡಿಕೋ ಹಾರು. "

" ತಿರಗಿ ಎಂದ ಬರತೀ ? "

" ನೀವ ಎಂದ ಬರತೀರಿ ? "

" ನೇಮ ಇಲ್ಲಾ. "

" ಮೂರು ನಾಲ್ಕು ತಿಂಗಳು. "

" ಅಷ್ಟು ದಿನಾ ? "

" ಅಷ್ಟರೊಳಗ ನಿಮ್ಮ ನೇಮ ಹತ್ತಬಹುದೂ....ಅಂತ. "

ಬಾಬೂ ಯಾಯಾನನ್ನು ನೋಡಿ ನಕ್ಕನು.

" ಧಣೇರ ನೀವ ಆದೀರಂತ ನನ್ನ ಬಾಳೆ....ನಾ ಒಬ್ಬಾಕಿನ್ನ ಹಸೀ ಗೆಣಸ ತಿಂದಹಾಂಗ ಚನ್ನ, ಪಾರಿ ತಿಂದಾರು."

" ಆಗಲಿ ಹೋಗಿ ಬಾ...."

ಯಾಯಾ ಎದ್ದಳು. ಹೊರಡಲನುವಾದಳು.

" ಇನ್ನ ಮ್ಯಾನ ಆಡಿಗಿ ಏನರಿ ? "

" ಹೊಂ... "

" ತಡೀರಿ...ಅಮ್ಮ ಬಿರಂಜೀ ಮಾಡತೀನಿ ಅಂತಿದ್ದಳು. ಕಳಿಸಿ ಕೊಡತೀನಿ. "

" ಬಿರಂಜಿ ಅಂದರೇನು ಮತ್ತ ? "

" ಅನ್ನ.... "

---

— ಬಾಸಿಂಗಬಲ

" ಅನ್ನೋ ಆಮಲೆಟ್ನೋ.... ? "

" ಛೀ ಛೀ ಛೀ....ಧಣೇರ....ನಾವೇನು ಹಸೀ ಕೋಳಿ ತಿನ್ನಾವರು ಅಂತ ತಿಳದೀರೋ ಏನೋ ತಿಳೀವಲ್ಲದಲ್ಲ. "

" ಹಾಗಾದರ ಬಿರಂಜಿ ಅಂದರ ಏನು ? "

" ಅನ್ನರಿ....ನೀವು ಬಟಾಟಿ ಪಲ್ಲೇ ಅಂತೀರಲ್ಲಾ.....ಹಾಗ...ಆದರ ಇದು ಬರೀ ಬೆಣ್ಣ್ಯಾಗ ಬೇಯತೈತಿ. "

" ನೋಡು ಮತ್ತ. "

" ಬಿರಂಜಿ ಕಳಸತೀನಿ....ನಿಮ್ಮ ನಾಲಿಗೆಗೆ ಗುರುತು ಸಿಕ್ಕರ ತಿನ್ನರಿ. ಇಲ್ಲಾದಿರ ಬಚ್ಚಲ ಮೋರಿ ಐತೆಲ್ಲಾ...ಆಯಿತ ? " ಯಾಯಾ ನಕ್ಕಳು.

" ಆಗಲಿ. "

ಯಾಯಾ ಮುಗುಳು ನಗೆ ನಗುತ್ತ ಬಿರಂಜಿಯ ಸಿದ್ಧತೆಗಾಗಿ ಮನೆಗೆ ತೆರಳಿದಳು.

---

## ೭. ಬೆಳುದಿಂಗಳು. * * *

ಬಾಬೂ ಬೆಳಗಾವಿಗೆ ಬಂದಾಗ ಹೊತ್ತು ಮೂಡಿ ಮೂರು ತಾಸಾಗಿತ್ತು. ಸೂರ್ಯನ ಕಿರಣಗಳು ಕುಳಿರ ಅಂಜಿಕೆಯಿಂದ ಮೆತ್ತಗೆ ಮೂಡಿದ್ದವು. ಗಿಡಗಳ ಮತ್ತು ಮನೆಗಳ ಹಾಸಿವ ನೆರಳಿನಲ್ಲಿ ನಡುಗು ಹುಟ್ಟುತ್ತಿತ್ತು. ಅವಶ್ಯಕ ಜನರಷ್ಟೇ ಹೊರಬಿದ್ದು ಬಿಡಲಾರದ ಕರ್ಮದಲ್ಲಿ ನಿರತರಾಗಿದ್ದರು. ಅನವಶ್ಯಕ ಜನರು ಹೊರಬಿದ್ದುದಕ್ಕೆ ತಪ್ಪೆಂದು ಅಂಗಡಿಗಳ ಒಳಿಸೆಕೆಗೆ ಬಾಯಿಬಿಡುತ್ತಿದ್ದರು. ಬೀದಿ ಬೀದಿಗಳಲ್ಲಿ ವಿವಿಧ ಕುಸುರುಗಳ ಎಣ್ಣೆಯ ಪ್ರದರ್ಶನವಾಗುತ್ತಿತ್ತು. ಚಳಿಗಾಲನಕ್ಕೆ ಹಳೆಯ ಸಂಸ್ಕೃತಿಯೋ ಮೇಲೆಂದು ಮೈತುಂಬ ಬಟ್ಟೆ ಬರೆಗಳು ಮೂಡಿದ್ದವು.

ಬಾಬೂ ಹಳೆಯ ಹೆಡ್ ಪೋಷ್ಟಾಫೀಸಿನ ಮಗ್ಗಲಿಗೆ ನಡೆದಾಗ ಎಲ್ಲಿ ಹೋಗಬೇಕೆಂಬ ಬಗ್ಗೆ ವಿಚಾರಿಸುತ್ತಿದ್ದನು. ಒಂದು ವರುಷದ ಹಿಂದಿನ ಘಟನೆಗಳು ಅವನ ಅಂತರಂಗದಲ್ಲಿ ಮೂಡಿ ಮೂಡಿ ಕಿಲ್ಮಿಷದ ನೈಜನ್ನು ಏರಿಸುತ್ತಿದ್ದವು. ತಾಯಿಯ ಕರುಳಿಗೆ ಓಗುಡಲಾ? ಬಲವಂತನ ಮೈತ್ರಿಗೆ ಶರಣು ಹೋಗಲಾ? ಎಂಬ ವಿಚಾರವು ಅವನ ಕಾಲಗತಿಗೆ ಅನಿಶ್ಚಿತತೆಯನ್ನು ತರುತ್ತಿತ್ತು. ವರುಷದ ಅಂತರಾಳದಲ್ಲಿ ಅವನಲ್ಲಿ ಬದಲಾವಣೆಯಾಗಿದ್ದರೂ ಹಿಂದಿನ ನೆನಹುಗಳ ಚುರುಕು ಪರಿಸ್ಥಿತಿಯ ಕಲ್ಪನೆಯನ್ನು ತಂದುಕೊಡುವಲ್ಲಿ ನಿರತವಾಗಿದ್ದವು. ನಿರ್ಧಾರದಿಂದ ನಡೆಯುತ್ತಿರುವ ಉಳಿದ ಜನರ ಗಡಬಿಡಿ ಅವನಿಗೆ ಅರ್ಥವಾಗಲಿಲ್ಲ. ತಾನು ಮಾತ್ರ ಯಾವಾಗಲೋ ಎಲ್ಲಿಯೋ ಮುಟ್ಟಿದರೆ ಸಾಕೆಂದು ತಿಳಿದುಕೊಂಡಿದ್ದನು. ಘಟನೆ ಮರೆಯಬಹುದು. ಘಟನಾಸ್ಥಳವು ಸುತ್ತಗಟ್ಟಿದಾಗ ನೆನಹಿನ ಬುಗ್ಗೆ ಪುಟಿಯದಿರುವದು ಅಶಕ್ಯ. ನೆನಹು ನುಗ್ಗಿದಾಗ ಭಾವನೆಗಳು ಉಕ್ಕಿಬರುವದು ಸಹಜ. ಭಾವನೆ ಉಕ್ಕಿದಾಗ ಸ್ವಭಾವ ಮನಸ್ಸಿನ ಹೊಳವುಗಳು ತಮ್ಮ ಕಾರ್ಯದಲ್ಲಿ ನಿರತವಾಗುವವು. ನೆನಹಿನ ಶಕ್ತಿ ಭಾವನೆಗಳ ಉಕ್ಕು ನೇರವಾಗಿ ನಿಂತಿವೆ. ಎರಡರ ಉಜ್ವಲತೆ ಸಮಪ್ರಮಾಣದಲ್ಲಿದೆ.

ಬಾಬೂನ ಕಾಲುಗಳು ಅನಿರೀಕ್ಷಿತವಾಗಿ ಬಾಲಬ್ರಹ್ಮಚಾರಿಯ ಬೀದಿಗೆ ಬಂದವು. ಬೀದಿಯ ಆ ಅಂಚಿಗೆ ಒಂದು ರಾಯಿಸ್ ರಾಯಲ್ ಗಾಡಿಯು ಹೊಳೆಯುತ್ತಿತ್ತು. ರಾಯಿಸ್ ರಾಯಲ್‌ಗಾಡಿ! ಬಾಬೂನಿಗೆ ಅದ್ಭುತವಾದ ವೇದನೆಯಾಯಿತು ಒಂದು ತಿರಸ್ಕಾರದ ಮುದ್ರೆಯಿಂದ ಅದರೆಡೆಗೆ ನೋಡಿದನು. ಆದರೆ ಅದೇನು? ಅದರಲ್ಲಿ ಕುಳಿತ ಹೆಂಗಸು ಯಾರು? ಕಮಲೆ! ಬಾಬೂ ತನ್ನ ಕಣ್ಣುಗಳನ್ನು ತಾನೇ ನಂಬದಾದನು. ಅವಳನ್ನು ಅಲ್ಲಿ ನೋಡಿದಾಗ ಗೋವಿಂದ ಶರಯೂ ಅವರ ನೆನಪಾಯಿತು. ಹಳೆಯ ಹುಚ್ಚುತನ ಮರುಕಳಿಸಿದುದನ್ನು ಪ್ರದರ್ಶಿಸಲು ತನ್ನನ್ನು ಮನೆಯವರು ಬರಮಾಡಿದರೇ ಎಂದು ಅವನಿಗೆ ಅನ್ನಿಸಿತು. ಒಂದು ಸಲ ಹೋಗಿ ಮುಂಗೈ ಹಿಡಿದು ಕೇಳೋಣ ಎನ್ನಿಸಿತು. ಇನ್ನೊಂದು ಸಲ ಹಾಳಾಗಿ ಹೋಗಲಿ ಅವರವರ ಪಾಪ ಅವರವರ ಕೊರಳಿಗೆ ಎನ್ನಿಸಿತು—

.........................

—ಬಾಸಿಂಗಬಲ

ಪಾಶದ ಕೂಪ ಊರ ಬದಿಗಿದ್ದರೆ ಅದನ್ನು ದಾಟಿ ನಡೆಯಬಹುದಿತ್ತು. ಆದರೆ ಮನೆಯು ಹತ್ತಿರಲ್ಲಿಯೇ ನೆಲಸಿರುವಾಗ ಕಡೆಗಣ್ಣುಗಳಿಂದ ಕಾಣು ವದೆಂತು! ಬಾಬೂ ನಿರ್ಧಾರದಿಂದ ಮೋಟಾರದೆಡೆಗೆ ನಡೆದನು.

ಸಮೀಪಕ್ಕೆ ಹೋದಮೇಲೆ ಕಮಲೆಯ ಅದ್ಭುತ ರೂಪನೋಡಿ ಬಾಬೂ ಬೆರಗಾದನು. ಕಿವಿಗಳಲ್ಲಿ ಸಿಲೋನದ ದುಂಡು ಮುತ್ತುಗಳು ಬೆಳ ಗುತ್ತಿದ್ದವು, ಪ್ರತಿಕೈಯಲ್ಲಿ ಬಿಲ್ವರದ ಹಿಂಬದಿಗೆ ಐದೈದು ಗುಲಾಬಿ ಬಳೆ ಗಳು ಲಮಾಣಿಗಳ ಅನುಕರಣವನ್ನು ತೋರಿಸುತ್ತಿದ್ದವು. ಮೈಗೆ ಬಿಗಿ ಯಾಗಿ ಅಂಟಿದ ಬ್ಲಾವುಜ, ಪುಷ್ಟವಾದ ಭುಜ, ಹೆಗಲು ಮತ್ತು ಬೆನ್ನುಗ ಳನ್ನು ಮಾರ್ಮಿಕವಾಗಿ ಮೂಡಿಸಿದ್ದಿತು. ಮೈಗೆ ಅಂಟಿದ ಸೀರೆ ಮೈ ಮುಟ್ಟಿದರೆ ಜಾರುತ್ತಿತ್ತು. ಮುಖದ ಇಂದ್ರಿಯಗಳು ಬಿರುಸಾಗಿದ್ದರೂ ತಾರುಣ್ಯದ ರಂಗದಿಂದ ರಕ್ತಪೂರ್ಣವಾಗಿದ್ದವು.

ಕಮಲೆಗೆ ಬಾಬೂನನ್ನು ನೋಡಿ ಅತ್ಯಾನಂದವಾಯಿತು. ಅವಳು ನಗುದುಂಬಿ ಗಾಡಿಯಿಂದ ಇಳಿದಳು. ಅವಳ ಆ ಅದ್ಭುತರಮ್ಯ ನಗೆಯನ್ನು ಅವನು ನೋಡಿದುದು ಇದೇ ಮೊದಲು. ಆ ನಗೆಯಲ್ಲಿ ತೃಪ್ತಿ, ಅಭಿಮಾನ, ಹೆಮ್ಮೆ, ಆನಂದ, ಸುಖ, ಆಕಾಂಕ್ಷೆ, ಎಲ್ಲವೂ ರೂಪುಗೊಂಡಿದ್ದವು.

" ಬಾಬೂ ಬಂದೆಯಾ !....ನೀನು ನಿನ್ನೆಯೇ ಬರುವಿಯೆಂದು ತಿಳಿ ದಿದ್ದೆವು. ನಡೆ ಮನೆಗೆ ಹೋಗೋಣ."

" ಕಮಲಾ ಮನೆಯ ಬದಲಾವಣೆಯಾಯಿತೇನು ? "

" ಇಲ್ಲ.....ಅದೇ !...ಯಾಕೆ ? "

" ಏಕಿಲ್ಲ. ನಡೆ ಹಾಗಾದರೆ.... "

" ನಿಲ್ಲು ಡ್ರಾಯವ್ಹರ ಬರಲಿ. "

" ಕಾರು ಯಾರದು ? "

" ಅಯ್ಯೋ ಹುಚ್ಚ ! " ಕಮಲಾ ನಗುತ್ತ ಅಂದಳು. " ನಿನಗೆ ಗೊತ್ತಿಲ್ಲವೇನು ? "

" ಇಲ್ಲ. "

" ಇದು ಡಾ. ಪರಮಾಜ ಅವರದು. "

" ಡಾ. ಪರಮಾಜ ಅಂದರೆ ಯಾರು ? "

" ಬಾಬೂ ನೀನು ಊರಿಗೆ ಯಾಕೆ ಬಂದೆ ? " ಕಮಲಾ ನೆಟ್ಟದಿಟ್ಟಿಯಿಂದ ಅಂದಳು.

" ನಿಮ್ಮನ್ನೆಲ್ಲ ಒಮ್ಮೆ ಕಣ್ತುಂಬ ನೋಡಿ ಹೋಗಲು. "

" ನನ್ನ ಮದುವೆಗೆ ಉಳಿಯುವದಿಲ್ಲವೇ ? "

" ಮದುವೆ ? "

" ಹೂ ! ನನ್ನದು. "

" ಯಾರೊಡನೆ? "

" ಈ ಮೋಟಾರ ಮಾಲೀಕರೊಡನೆ ? "

" ಡಾ. ಪರಮಾಜರೊಡನೆ ! "

" ಹೂಂ " ಹೆಮ್ಮೆಯಿಂದ ಕಮಲೆ ಅಂದಳು.

ಬಾಬೂನಿಗೆ ಬೆರಗಾಯಿತು. ನಗುಮೊಗದುಂಬಿ ಅಂದನು. " ಕಮಲಾ ನಿನ್ನ ಭಾಗ್ಯ ದೊಡ್ಡದು.....ಆದರೆ ಇದು ಹೇಗೆ ಘಟಿಸಿತು ? "

" ಅದನ್ನೆಲ್ಲ ಹಿಂದುಗಡೆ ಹೇಳುವೆ."

ಡಾ. ಪರಮಾಜರು ಮೋಟಾರ ನಿರ್ದೇಶಕನೊಡನೆ ಇಳಿದು ಬಂದರು. ಕಮಲಾ ಅವರನ್ನು ನೋಡಿ ನಕ್ಕಳು. ಬಾಬೂನನ್ನು ತೋರಿಸುತ್ತ,

" ನನ್ನ ಅಣ್ಣ ಬಾಬೂ " ಎಂದಳು.

" ಓಹೋ ಬಹಳ ಆನಂದ ! " ಡಾಕ್ಟರರು ಬಾಬೂನ ಬಲಗೈಯನ್ನು ಹಿಡಿದು ಕೈ ಕುಲುಕಿದರು. " ನಾನು ನಿಮ್ಮ ಹೆಸರನ್ನು ಕೇಳಿದ್ದೇನೆ.....ಸತ್ಯಧಾರಿಗಳು..... "

" ನಾನು ಮನೆಗೆ ಹೋಗಬೇಕು. ಕಾರು ಒಯ್ಯಲಾ ? " ಕಮಲೆ ಡಾ. ಪರಮಾಜರನ್ನು ನೋಡುತ್ತ ಅಂದಳು.

" ಓಹೋ ಆಗಲಿ.....ರಘುವೀರ ಇವರನ್ನು ಮನೆಗೆ ಮುಟ್ಟಿಸಿ ಬಾ.....ಅಣ್ಣನ ಭೆಟ್ಟಿ ಆಪ್ತಾಲೋಚನೆ....ನಾನೇಕೆ ಅಡ್ಡಬರಲಿ ? " ಎಂದು

ನಗುತ್ತ ಪೆರಮಾಜರು ಅವರಿಬ್ಬರನ್ನು ಬೀಳ್ಕೊಟ್ಟರು. ರಘುವೀರನು ಕಾರಿನ ತಿರುಗಣಿಯನ್ನು ಹಿಡಿದನು ಬಾಬೂ ಕಮಲೆ ಇಬ್ಬರೂ ಒಳಗೆ ಕುಳಿತರು. ಕಾರು ಭುರ‍್ರೆಂದು ಚೀರಿ ಓಟಗುಟ್ಟಿತು. ಕ್ಷಣದಲ್ಲಿಯೇ ಕುಲಕರ್ಣಿ ಬೀದಿಯ ಹುಣಿಸೆಯ ನೆರಳಿನಲ್ಲಿ ಉಯ್ಯಾಲೆಯಾಡಿ ನಿಂತಿತು. ಬಾಬೂ ಕಮಲೆ ಇಬ್ಬರೂ ಇಳಿದರು.

"ಹೂ, ಹೋಗಲಿ!" ಎಂದು ಕಮಲೆ ರಘುವೀರನಿಗೆ ಅಪ್ಪಣೆ ಕೊಟ್ಟಳು ಕಾರು ಹೊರಟು ಹೋಯಿತು. ಕಮಲೆ "ಅವ್ವಾ! ಅವ್ವಾ!! ಬಾಬೂ ಬಂದ" ಎಂದು ಚೀರುತ್ತ ಮನೆಯೊಳಗೆ ಹೊಕ್ಕಳು. ಗೋದಾವರಿ ಒಳಗಿನಿಂದ ಹೊರಗೆ ಬಂದಳು. ಬಾಬೂ ಹೋಗಿ ಬಗ್ಗಿ ನಮಸ್ಕರಿಸಿದನು. ತಾಯಿಯು ಎತ್ತಿ ಹಿಡಿದಳು.

"ನೀನು ಬರುವಿಯೋ ಇಲ್ಲವೋ ಎಂದು ನಮಗೆ ಅರೆನಂಬಿಗೆ ಬಾಬೂ" ಗೋದಾವರಿ ಅಂದಳು.

"ಅವ್ವಾ ಬಾಬೂನಿಗೆ ನನ್ನ ಮದುವೆಯ ವಿಚಾರವೇ ಗೊತ್ತಿಲ್ಲವಂತೆ!" ಕಮಲಾ ಅಂದಳು.

"ಅವನಿಗೆ ಹೇಗೆ ತಿಳಿಯಬೇಕು?"

"ಅಂದರೆ?" ಕಮಲಾ ಕೇಳಿದಳು.

"ಪತ್ರದಲ್ಲಿ ಅವನಿಗೆ ಈ ಸಮಾಚಾರ ತಿಳಿಸಿರಲಿಲ್ಲ. ಕೇವಲ ಬಂದು ಹೋಗು ಎಂದು ಬರೆದಿತ್ತು ಅಷ್ಟೇ! ..."

"ಹೂಂ....." ಕಮಲೆ ಅರ್ಥ ತಿಳಿದು ಅಂದಳು.

"ಬಾಬೂ ಕಾಲು ತೊಳೆ. ತುಸು ತಿನ್ನಲು ಕೊಡುವೆ." ಗೋದಾವರಿ ಅಂದಳು.

ಬಾಬೂ ತಂದ ಚೀಲವನ್ನು ಗೂಟಕ್ಕೆ ನೇತು ಹಾಕಿದನು. ಬಚ್ಚಲಕ್ಕೆ ಹೋಗಿ ಕೈಕಾಲು ಮೋರೆ ತೊಳೆದುಕೊಂಡು ಬಂದನು. ಮಣೆಯ ಮೇಲೆ ಕುಳಿತು ಫಲಾಹಾರ ಜಗಿಯಹತ್ತಿದನು.

ಕಮಲೆ ತನ್ನ ಟ್ರಂಕು ತೆರೆದು ಒಂದು ಬೆಳ್ಳಿಯ ಕರಂಡಕದಲ್ಲಿಯ ತನ್ನ ಅಲಂಕಾರಗಳನ್ನು ತೆಗೆದು ಒಂದೊಂದೇ ಬಾಬೂನಿಗೆ ತೋರಿಸಹತ್ತಿ

ದಳು. ಚಂದ್ರಹಾರ, ಚಪಲಹಾರ, ನೆಲ್ಲಿಯಹಾರ, ಗೋಟು, ಪಾಟಲಿ, ಜೋಡು ಬಿಲ್ವರು ಒಂದೊಂದೇ ತೋರಿಸಿದಳು. ಅವುಗಳನ್ನು ನೋಡಿ ಬಾಬೂನಿಗೆ ಹಿಡಿಸಲಾರದಷ್ಟು ಆನಂದವಾಯಿತು. ಬನಾರಸಿ ಪತ್ತಲ, ಚಂದೇರಿ ಖಣ, ದಿನಾ ಉಡಲು ಜರದ ಕಿರಿಗೆಗಳು ಎಲ್ಲವನ್ನೂ ಬಿಚ್ಚಿ ಸೆರಗಿನ ವರ್ಣನೆಯೊಂದಿಗೆ ಅದು ದೊರಕಿದ ಅಂಗಡಿಯ ಹೆಸರು, ಓಡಾಡಿದ ಮೈಲುಗಳ ಸಂಖ್ಯೆ, ಅದಕ್ಕೆ ಬಿದ್ದ ಬೆಲೆಯು ಮಿತಿ ಎಲ್ಲವನ್ನೂ ವಿವರಿಸಿದಳು. ತಾಯಿಯು ಹೊಟ್ಟೆ ತಣ್ಣಗೆ ಮಾಡುವ ಸೀರೆ ಅವಳು ಕೊನೆಗೆ ತೋರಿಸಿದಳು. ಅವನು ಬಂದ ಮೇಲೆ ಧೀರನು ತಮ್ಮಿಬ್ಬರಿಗೂ ಅರಿವೆ ಕೊಳ್ಳುವೆನೆಂದು ಹೇಳಿದಳು.

"ನನ್ನ ಅರಿವೆ ಬೆಳ್ಳಗೆ" ಬಾಬೂ ಅಂದನು.

"ಅಂದರೆ?"

"ಕಮಲಾ ಈ ಬಣ್ಣದ ಬೆಡಗು ಹೆಣ್ಣುಮಕ್ಕಳಿಗೆ. ನನಗೋ.... ಮೂರು ವಾರ ಖಾದಿ....ಒಂದು ದೋತರ ಸಾಕು."

"ಬಿಡು ನೀನು ಯಾವಾಗಲೂ ಹೀಗೇ...ಮದುವೆಯ ದಿನವಾದರೂ ಒಂದು ರೇಶಿಮೆಯ ಅಂಗಿ ಹೊಲಿಸು,"

"ಕಮಲಾ, ಮದುವೆ ನಿನ್ನದೋ? ನನ್ನದೋ?"

"ಮದುವೆ ನನ್ನದು.....ಆದರೆ ಮದುವೆಯ ದಿನಗಳಲ್ಲಿ ನನ್ನ ಬಂಧುಗಳು ಬರಗಾಲದ ಪ್ರೇತಗಳಂತೆ ಕಾಣಬಾರದು."

"ಕಮಲಾ!" ಗೋದಾವರಿ ನಡುವೆ ಬಿಗಿ ಹಿಡಿದಳು.

"ಅವ್ವಾ ನೀನು ಸುಮ್ಮನಿರು.....ಬಾಬೂ ನಾನು ಕೈಮಗ್ಗದ ರೇಶಿಮೆ ಅರಿವೆ ತರುವೆ. ನೀನು ಹೊಲಿಸು. ಗೋಸಬಾಳದ ದೇಸಾಯರು ಇನ್ನು ಲಾಂಗ ಕ್ಲಾಥ ತೊಡುವದು ಸಾಕು."

"ಕಮಲಾ ನಾವು ದೇಸಾಯರ ಮುತಾಲೀಕರು. ನಾವೇ ದೇಸಾಯರಲ್ಲ. ಚಾಲದ ಚವರಿ ತಲೆಗೆ ಶೋಭಿಸಲಾರದು ...."

"ಬಾಬೂ ನಿನ್ನ ತೋಟಪ ಗಳಿಕೆ ನಮಗೆ ತಿಳಿದು ಬಂದಿದೆ..... ಒಂದು ಸಲ ಗೋಸಬಾಳಕ್ಕೆ ಕೂಡ ಹೊರಟಿದ್ದೆವು....."

---

—ಬಾಸಿಂಗಬಲ

" ಬಂದಿದ್ದರೆ ಚನ್ನಾಗಿತ್ತು..... "

" ಅವ್ವಾ ! " ಕಮಲೆ ಅಂದಳು. " ನಾನಿಷ್ಟು ಹೊರಗೆ ಹೋಗಿ ಬರಲೇ.... ? ಶಿಂಪಿಗ ಬ್ಲಾವುಜ ಹೊಲಿದಿದ್ದರೆ ತರಬೇಕು.... ಹೋಗುವಾಗ ಧೀರನನ್ನು ಕಳಿಸುವೆ. "

ಕಮಲೆಯು ಚಪ್ಪಲಿ ಮೆಟ್ಟಿ ಹೊರಗೆ ಹೋದಳು. ಬಾಬೂ ಚಕ್ಕುಲಿಯನ್ನು ಕುರುಕುರಿಸುತ್ತಿದ್ದನು. ಹಲ್ಲುಗಳ ರವಕ್ಕೆ ಮನಸ್ಸು ವ್ಯಗ್ರವಾಗುತ್ತಿತ್ತು. ಎದುರಿಗೆ ಕುಳಿತ ಗೋದಾವರಿಯ ಕಣ್ಣುಗಳ ಜೊತೆಗೆ ಅವನ ಕಣ್ಣುಗಳ ಕಣ್ಣುಮುಚ್ಚಾಲೆಯಾಟ ನಡೆದಿತ್ತು. ಬಾಬೂನ ಮೌನವನ್ನು ಧೈರ್ಯದಿಂದ ಗೋದಾವರಿಯ ಕಣ್ಣುಗಳು ಮಾತಿನ ಹೊಲಬನ್ನು ಅರಿಯಲು ಎತ್ತುಗಡೆ ನಡೆಯಿಸಿದ್ದವು.

" ಅವ್ವಾ ಕಮಲೆ ಹೋದಳೇ ? " ಬಾಬು ಅಂದನು.

" ಹೂಂ....ಅವಳ ಹಿಂದೆ ಆಡುವ ಮಾತೇನು ? "

" ಅಲ್ಲಾ.....ಇದು ಹೇಗೆ ಕೂಡಿತು ? "

" ಕಮಲೆಯದೇ ?....ಬಾಬೂ ನಾಲ್ಕು ತಿಂಗಳು ಹಿಂದಿನಮಾತು. ಧೀರ ವಿಷಮಜ್ವರದಿಂದ ಬಳಲಹತ್ತಿದನು. ಬಲವಂತನು ತನ್ನ ಮನೆಯ ಹತ್ತರದ ಡಾಕ್ಟರನನ್ನು ಕರೆತಂದನು. ಅವರೇ ಪರಮಾಜ ಡಾಕ್ಟರರು. ಅವರು ಧೀರನನ್ನು ಪರೀಕ್ಷಿಸಿ ಜತನದಿಂದ ಔಷಧಿ ಕೊಟ್ಟರು. ಅದೇ ದಿನ ಅವರು ಕಮಲೆಯನ್ನು ನೋಡಿದರು. ಒಂದು ದಿನ ತಾವೇ ಮೋಟಾರು ತೆಗೆದುಕೊಡು ಬಂದರು. ಔಷಧಿಗಾಗಿ ಕಮಲೆಯನ್ನು ಕರೆದುಕೊಂಡು ಹೋದರು. ಮುಂದೆ ಕಮಲೆಯು ಅಲ್ಲಿಗೆ ಹೋಗಹತ್ತಿದಳು. ಅವಳಿಗೆ ತಿಳಿಹೇಳಿದೆ. ಧೀರ ಪೂರ್ಣ ಗುಣವಾದ ಮೇಲೆ ಒಮ್ಮೆ ಮನೆಗೆ ಬಂದರು. ಧೀರನು ಅವರಿಗೆ ರೊಕ್ಕ ಕೊಡಹೋದ. ಪ್ರತಿಫಲ ನನಗೆ ಇದು ಬೇಡ ಎಂದು ಅವರೆಂದರು. ಹಾಗಾದರೆ ಏನು ಬೇಕು ಎಂದು ಧೀರ ಕೇಳಿದನು. ನಾನು ಕೇಳಿದ್ದು ಕೊಡುವಿರಾ ಎಂದರು. ನಮಗೆ ತಿಳಿಯಲಿಲ್ಲ. ಇನ್ನೊಂದು ಸಲ ಬರುವೆ ಎಂದು ಹೇಳಿ ಕಮಲೆಯ ಕಡೆಗೆ ತೀವ್ರಗಣ್ಣಿನಿಂದ ನೋಡುತ್ತ ಹೋದರು. ನಮಗೆ ಭಯವಾಯಿತು. ಇದಾದ ಕೆಲದಿನಗಳ ಮೇಲೆ

ಮತ್ತೆ ಮನೆಗೆ ಬಂದರು. ಮದುವೆಯ ವಿಚಾರವೆತ್ತಿದರು. ಒಳ್ಳೇದು ವಿಚಾರ ಮಾಡೋಣ ಎಂದೆವು. ಡಾಕ್ಟರರೇ ನಮ್ಮ ನಿಮ್ಮ ಯೋಗ್ಯತೆ ಯಲ್ಲ ಎಂದು ಧೀರ ಕೇಳಿದನು. ಹಣದಿಂದ ಅಳೆಯಬೇಡಿರಿ, ಗುಣದಿಂದ ಅಳೆಯಿರಿ, ನಾನು ಕಮಲೆಗೆ ಮಾರು ಹೋಗಿದ್ದೇನೆ, ಅವಳಿಲ್ಲದೆ ನನ್ನ ಜನ್ಮ ವ್ಯರ್ಥವೆಂದರು. ಒಪ್ಪಿರಿ ಎಂದು ಹಟವನ್ನೇ ಹಿಡಿದರು. ಬಾಬೂ ನನ್ನು ವಿಚಾರಿಸೋಣ ಎಂದು ನಾನು ಅಂದೆನು. ಬಾಬೂನನ್ನು ವಿಚಾರಿಸಿ ದಂತೆಯೇ, ಡಾಕ್ಟರರೇ ನೀವು ನಮಗೆ ಜೀವದಾತರು ನಿಮ್ಮ ಉಪಕಾರ ಹಿರಿದು....ನಾನು ಒಪ್ಪಿದೆ. ಇದಕ್ಕೆ ಕಮಲೆ ಒಪ್ಪಬೇಕು ಎಂದು ಧೀರ ಅಂದನು. ತಾವು ಕಮಲೆಯ ಒಪ್ಪಿಗೆಯನ್ನು ಆಗಲೇ ತೆಗೆದುಕೊಂಡ ಬಗ್ಗೆ ತಿಳಿಸಿದರು. ಸಂಭಾಷಣೆಯ ಮರುದಿನವೇ ನಿನಗೆ ಓಲೆ ಹಾಕಿದರು."

ಬಾಬೂ ಕೆಲಹೊತ್ತು ಮಾತನಾಡಲಿಲ್ಲ. ದಿವ್ಯದರ್ಶನವಾದ ಭಕ್ತನಂತೆ ಅವನ ಮುಖಭಂಗಿಯಾಗಿತ್ತು. ಕಣ್ಣುಗಳು ನಿಸ್ತೇಜವಾಗಿದ್ದವು. ಮನಸ್ಸು ಯಾವುದನ್ನೋ ಹುಡುಕಿಕೊಂಡು ಹೋಗುವ ನಗರರಕ್ಷಕನಂತೆ ದ್ವಿವಿಧ ವಾಗಿತ್ತು.

"ಅವ್ವಾ....?" ಬಾಬೂ ಅಂದನು.

"ಏನು ಬಾಬೂ?"

"ಅವ್ವಾ ಕಮಲೆಯ ಬಗೆಗೆ ಅವರಿಗೆ ತಿಳಿದಿದೆಯೋ?"

"ಇಲ್ಲ.....!" ಗೋದಾವರಿ ಅಂದಳು. "ಬಾಬೂ ಅದನ್ನು ಹೇಳು ವದಾದರೂ ಹೇಗೆ? ಅವಳ ಭಾಗ್ಯವನ್ನು ನಮ್ಮ ಕಿಡಿಗೇಡಿತನದಿಂದ ಕೊಡವಬೇಕೇಕೆ?"

"ಈ ವಿಷಯ ಮದುವೆ ಆಗುವ ಮೊದಲೇ ತಿಳಿಯುವದು ಯೋಗ್ಯವೋ? ಆದ ಮೇಲೋ?."

"ತಿಳಿಯಬೇಕು ನಿಜ. ಆದರೆ ಅದನ್ನು ತಿಳುಹಿಸುವವರು ನಾವೋ ಬೇರೆಯವರೋ? ನಮ್ಮ ಮನೆಯ ಸಾಮಾನುಗಳನ್ನು ಪೇಟೆಗೆ ಹಚ್ಚ ಬೇಕೇ?"

—ಬಾಸಿಂಗಬಲ

“ ಅವ್ವಾ ಕಮಲೆಯ ಭವಿತವ್ಯದ ಸುಖ ಒಂದು ಕಡೆಗೆ, ನಮ್ಮ ಮನೆಯ ಪ್ರತಿಷ್ಠೆ ಇನ್ನೊಂದು ಕಡೆಗೆ ಸೆಣಸಿ ನಿಂತಿವೆ. ನೀನು ಬೆನ್ನು ಕಟ್ಟುವ ಬದಿ ಯಾವದು? ”

“ ಬಾಬೂ ಹತ್ತು ಸುಳ್ಳು ಹೇಳಿ ಒಂದು ಮದುವೆಯ ಪುಣ್ಯ ಕಟ್ಟಿ ಕೊಳ್ಳಬೇಕು. ನಮ್ಮ ಹೆಣ್ಣು ತೋರಿಸಿ ಅಳಿಯನಾಗು ಎಂದು ನಾವು ಅವರಿಗೆ ಗಾಗರೆದಿಲ್ಲ. ತಾನು ಆಯ್ದ ವಸ್ತು ತನ್ನ ಯೋಗ್ಯತೆಗೆ ಅನು ಗುಣವಾಗಿ ಇದೆಯೋ ಇಲ್ಲವೋ ಎಂದು ತಿಳಿದುಕೊಳ್ಳುವದು ಆಯ್ಕೆ ಗಾರನ ಕೆಲಸ. ಡಾಕ್ಟರರ ಕಣ್ಣು ಕುರುಡಾದರೆ ಅಜ್ಞರಾದ ಗಾವಿಲರು ಏಕೆ ಅಂಜನ ಸುರಿಯಬೇಕು!”

ಕಪ್ಪಿನಲ್ಲಿ ದಾರಿಕಾಯುತ್ತಿದ್ದ ಕಾಫಿಯನ್ನು ಬಾಬೂ ಗಟಗಡಕುಡಿ ದನು. ಹೊರಗೆ ಕಾಲುಸಪ್ಪಳವಾಯಿತು. ಧೀರನು ಮೆಟ್ಟು ಕಳೆದು ಒಳಗೆ ಬಂದನು.

“ ಯಾವಾಗ ಬಂದೆ। ”

“ ಈಗಲೇ... ”

“ ಈಗ ಕಮಲೆ ಬಂದು ಹೇಳಿದಳು. ಆಳಿಗೆ ಹೇಳಿ ಬಂದು ಬಿಟ್ಟೆ. ಕಮಲೆ ನನಗೆ ಎಲ್ಲ ಸಂಗತಿ ತಿಳಿಸಿದಳು. ಹೇಗಿದ್ದಾರೆ? ”

“ ಲಕ್ಷಣವಾಗಿದ್ದಾರೆ. ”

“ ಬಾಬೂ ನೀನು ಕಮಲೆಯ ವಿಷಯ ಅವರಿಗೆ ಹೇಳಿಗೀ ಳೀಯೋ.... ನಿನ್ನ ಸತ್ಯಾನ್ವೇಷಣ ಇಲ್ಲಿ ತರಬೇಡ. ”

“ ಅದನ್ನೇ ಈಗ ವಿಚಾರಿಸುತ್ತಿದ್ದ. ಡಾಕ್ಟರರಿಗೆ ಈ ವಿಷಯ ತಿಳಿಯಬೇಕಂತೆ ”

“ ಬಾಬೂ ಈ ನಿನ್ನ ಮಂಕುಬೂದಿ ಬಿಟ್ಟುಬಿಡು. ....ಪರದೇಶ ಹಲ್ಲಿ ಅದೆಷ್ಟು ಜನರ ಕೂಡ ತೆಕ್ಕೆಬಿದ್ದು ನರ್ತನಮಾಡಿರಬೇಕೋ ಅವರ ದೇಹ. ...ಈ ವಿಷಯ ನನಗೆ ಬಿಡು. ಜೋಳದಲ್ಲಿ ಹರಳು ಬೆರಸಿ ಮಾರಬೇಡ. .... ಅವ್ವಾ ಇನ್ನೊಂದು ಮಾತು. ಬಿಂದಾಚಾರ್ಯರು ನಿನ್ನನ್ನು ಕೇಳುತ್ತಿದ್ದರು. ”

" ಏತಕ್ಕೆ? "

" ಏನೋ ಹೆಣ್ಣು ನೋಡಲಿಕ್ಕೆ ಅಂತೆ. "

" ಅಹುದು ಧೀರ. ಅವರು ತಮ್ಮ ಮಗಳನ್ನು ನಿನಗೆ ತೋರಿಸಬೇಕೂ ಎಂದು ಅನ್ನುತ್ತಿದ್ದರು. ಬಾಬೂನೂ ಹೇಗಾದರೂ ಬಂದಿದ್ದಾನೆ. ಹೋಗಿ ನೋಡಿ ಬರುವಾ. ಒಪ್ಪಿತವಾದರೆ ಎರಡು ಭೋರ್ಜಗುಲಿ ಎದುರೆದುರು ಬರೆಯಿಸಬಹುದು. "

" ನೋಡಿರಿ....ನಿಮ್ಮ ಎಲ್ಲರ ಮನಸು." ಧೀರ ಅಂದನು.

" ಯಾಕೆ ಬಾಬೂ?" ಗೋದಾವರಿ ಅಂದಳು.

" ಒಳ್ಳೇದು. ಹೋಗಿ ನೋಡಿ ಬರಬಹುದಲ್ಲಾ? " ಬಾಬೂ ಅಂದನು.

---

## ೮. ಇಬ್ಬರು ಚಂದ್ರರು. * * *

ಬಾಬೂ ಊಟ ತೀರಿಸಿ ಮನೆಯನ್ನು ಬಿಟ್ಟಾಗ ಮಧ್ಯಾಹ್ನದ ಮೂರಾಗಿತ್ತು. ಅವನು ತನ್ನ ಗೆಳೆಯನ ಮನೆಗೆ ಹೋಗಬೇಕೆಂದು ವ[illegible]ದಿದ್ದನು. ಮನಸ್ಸು ಬೆಳಗಿನ ಮಾತುಗಳನ್ನು ಮೆಲಕಾಡಿಸುತ್ತಿತ್ತು. ಸತ್ಯಧಾರಿಗಳು ಎಂಬ ಪರಮಾಜರ ಮಾತು ಅವನ ಎದೆಯಗುಂಡಿಯಲ್ಲಿ ಮೀಟುತ್ತಿತ್ತು. ಮೀಟಿದಾಗ ಉರಿ ಭುಗಿಲ್ಲೆಂದು ನೆಗೆದು ಕವನ ಪ್ರತಿಭೆ[illegible] ಕದ ತೆಗೆಯುತ್ತಿತ್ತು. ಬಾನಸಿರಿ, ಪ್ರಕೃತಿರಮ್ಯತೆ, ಬೇವಿನ ನೆರಳು ಪೂರ ಇದ್ದುದಕ್ಕೆ ಕವನಚಿಗುರು ಕುಡಿಯಲ್ಲಿಯೇ ಕಮರಿತು. ಬಾಬೂ ಆಗ[illegible] ಹೃದಯನಾಗಿ ಕಣ್ಣು ತೆರೆದಾಗ ತನ್ನ ಹೆಸರುಗೊಂಡು ಕೂಗಿದುದನ್ನು ಕೇಳಿದನು. ಆಕಾಶದಿಂದ ಬಂದ ಕೂಗಿಗೆ ಕೊರಳು ಎತ್ತಬೇಕಾಯಿತು. ಮೇಲೆ ಏರಿದ ದಿಟ್ಟಿಗೆ, ಪರಮಾಜರ ಹಸನ್ಮುಖ, ಸ್ವಾಗತದ ಕೈ ಸ್ಪಷ್ಟವಾಗಿ ಕಂಡವು. ಮಿತ್ರನ ತುತ್ತು ಕೊಡುವ ಮಾವನ ಕಡೆಗೆ ಸದ್ಯಕ್ಕಂತೂ ಊಟಕ್ಕೇಳಬೇಕಾಯಿತು. ಬಾಬೂ ಪರಮಾಜರ ಮನೆಯ ಅಟ್ಟವನ್ನೇರಿ ಮೇಲೆ ಹೋದನು.

— [illegible]

ಪರಮಾಜರ ಮಹಡಿ ರಸಿಕನ ಜೀವನವನ್ನು ಪಡಿಮೂಡಿಸಿತ್ತು. ಆಸನಗಳಲ್ಲಿ, ಚಿತ್ರಗಳಲ್ಲಿ, ಬಣ್ಣದ ಚಿಗುರುಗಳಲ್ಲಿ ಅವರ ಚಾಣ್ಮೆಯು ಆಯ್ಕೆ ಎದ್ದು ಕಾಣುತ್ತಿತ್ತು. ಉಡುಪಿನಲ್ಲಿ ಬಣ್ಣದ ಬೆರಕೆಯಿಲ್ಲದಿದ್ದರೂ ಕುಸುರಿನ ಕೆತ್ತನೆಯ ಕೆಲಸವಿತ್ತು. ದುಂಡಗಿನ ಮೊಗಕ್ಕೆ ಗಲ್ಲಗಳು ತುಸು ಉಬ್ಬಿದ್ದರೂ ಗದ್ದದ ದೂರಾನ್ವಯದಿಂದ ತ್ರಿಕೋಣದ ಹಿಡಿತ ತಪ್ಪಿತ್ತು. ಕೂದಲುಗಳ ಎಸುಟುಗಳು ಹಾರಿ ಹಾರಿ ನೆತ್ತಿಯ ಬೆಡಗನ್ನು ಕ್ಷಣಕ್ಷಣಕ್ಕೂ ಬದಲು ಮಾಡುತ್ತಿದ್ದವು. ಕಣ್ಣುಗಳು ಚಂಚಲವಾಗಿ ಉಜ್ವಲವಾಗಿ ಒಳಗೆ ಏನನ್ನೋ ಮಡಗಿಕೊಂಡಿದ್ದವು.

ಬಾಬೂ ಒಳಗೆ ಹೋದಮೇಲೆ ಡಾಕ್ಟರರು ಅವನಿಗೆ ಕೂಡಲು ಹೇಳಿದರು. ತಾವೂ ಆಸನದ ಮೇಲೆ ಕುಳಿತರು.

"ಇದೇ ಕಡೆಗೆ ಹೊರಟಿದ್ದಿರಾ?" ಡಾಕ್ಟರರು ಬಾಬೂನನ್ನು ಕೇಳಿದರು.

"ಇಲ್ಲ. ಬಲವಂತನ ಮನೆಗೆ ಹೋಗಬೇಕಾಗಿತ್ತು."

"ನಾನು ಅಡ್ಡಬಂದೆನೇನು?"

"ಏನೂ ಇಲ್ಲ....ನಾನು ನಿಮ್ಮನ್ನು ಕಾಣಲೇಬೇಕಾಗಿತ್ತು. ನಿಮ್ಮ ಕೆಲಸಕ್ಕೆ ವ್ಯತ್ಯಯವಿಲ್ಲವಷ್ಟೇ."

"ಇದು ಅಭ್ಯಾಸದ, ಆರಾಮದ ಕಾಲ."

"ನೀವು ಇನ್ನೂ ಅಭ್ಯಾಸ ಮಾಡಬೇಕಾಗುವದೇ?"

"ಬಾಬೂರಾವ" ಪರಮಾಜರು ಎದ್ದು ಸಮೀಪದ ಒಂದು ಕಪಾಟದ ಬಾಗಿಲು ತೆರೆದು ಅಂದರು. "ಇದು ನೋಡಿರಿ ಪುಸ್ತಕದ ಸಂಗ್ರಹ. ಡಾಕ್ಟರರೆಂದರೆ ಕಲಿತ ಭಾಂಡವಲದಿಂದಲೇ ಪೆನ್‌ಶನ್ ಆಗುವವರೆಗೆ ಕಲಿಸುವ ಪ್ರಾಥಮಿಕ ಶಿಕ್ಷಕರೆಂದು ತಿಳಿದಿದ್ದೀರಾ? ಒಂದು ಕೇಸು ನಮಗೆ ಬಂದರೆ ಅದೊಂದು ಪ್ರಯೋಗದ ಸ್ಥಳ. ಪ್ರತಿಕೇಶಿನಿಂದ ನಮ್ಮ ಔಷಧಿಗಳ ಪ್ರಯೋಗ, ಇಂಜೆಕ್ಶನದ ರೀತಿ, ಮುಲಾಮುಗಳ ಲೇಪನ ಬದಲಾಗುತ್ತವೆ. ದಿನವೂ ನಾವು ಪ್ರಗತಿ ಹೊಂದುತ್ತಿರುತ್ತೇವೆ."

" ಮತ್ತು ರೊಕ್ಕದ ಬೇಡಿಕೆ ಬಲುವಾಗುತ್ತದೆ. "

" ಬಾಬೂರಾವ ನೀವು ಇನ್ನೂ ಚಿಕ್ಕವರು. ಆದರಲ್ಲಿಯೂ ನನ್ನ ಅನುಯಾಯಿಗಳು. ಇಲ್ಲವಾದರೆ ಒಂದು ತೊಟ್ಟು ಬೈದು ಮುಂದೆ ಸಾಗುತ್ತಿದ್ದೆ. ಅಲ್ಲಾ ನೀವು ಸತ್ಯಧಾರಿಗಳು. ನಾಳೆ ಕಾಂಗ್ರೆಸು ಅಧಿಕಾರಾರೂಢವಾದಾಗ ನಿಮ್ಮನ್ನು ಮಂತ್ರಿಪದಕ್ಕೇರಿಸಿದರೆ ಒಲ್ಲೆನ್ನುವಿರಾ ? "

" ಸಬಲ ಕಾರಣಗಳಿದ್ದರೆ ಒಲ್ಲೆನ್ನಬಹುದು. "

" ಈ ಅಹುದು ಗಿಹುದುಗಳ ಬಂಟತನ ಬೇಡ. ನಿಮ್ಮ ಉತ್ತರ ವೇನು ? "

" ವ್ಯಕ್ತಿಶಃ ನನಗೆ ಮಂತ್ರಿಪದ ಬೇಡ. "

" ಕಾರಣವಿರಬಹುದಲ್ಲ. "

" ಯೋಗ್ಯತೆ. "

" ಗಿಡ ಮೊದಲೋ, ಬೀಜ ಮೊದಲೋ ? "

" ಉತ್ತರಿಸುವದು ಕಠಿಣ. "

" ಪ್ರಶ್ನೆ ಸರಲವಿದ್ದಾಗ ಉತ್ತರ ಕಠಿನವಾಗಬೇಕೇ ? "

" ಗಿಡ ಬೀಜ ಎರಡೂ ಮುಖ್ಯ ಎಂದು ಹೇಳುವದು ಒಂದು ರೀತಿ."

" ಅದರಂತೆಯೇ ಯೋಗ್ಯತೆ ಮತ್ತು ದುಡಿತ. ಇವುಗಳಲ್ಲಿ ಯಾವುದು ಮೊದಲು ಎಂದು ಹೇಳುವದು ಕಠಿನ. ಎರಡೂ ಮಹತ್ವ. ದುಡಿದಾಗ ಯೋಗ್ಯತೆ ಬರುವದು. ಯೋಗ್ಯತೆ ಬಂದಾಗ ದುಡಿತ ಹಗುರಾಗುವದು. ದುಡಿಯದಿದ್ದರೆ ಯೋಗ್ಯತೆ ಹೇಗೆ ಬರಬೇಕು ? "

" ಮಾತುಗಳನ್ನು ಒಪ್ಪಬೇಕಾಗಿದೆ. "

" ಆದುದರಿಂದ ಕೆಲಸ ಮಾಡಬೇಕು. ದುಡಿದ ಮೇಲೆ ಪ್ರತಿಫಲ ಪಡೆಯಬೇಕು. ನಾವೂ ದುಡಿಯುತ್ತೇವೆ. ಪ್ರತಿಫಲ ಬೇಡುತ್ತೇವೆ. ತಪ್ಪೇನು ? "

" ಅವಾಸ್ತವ ಬೇಡಿಕೆ ತಪ್ಪಲ್ಲವೇನು ? "

" ಅವಾಸ್ತವವೆಂದು ನಿರ್ಧರಿಸುವ ಅಳತೆಗೋಲು ಯಾವುದು ? "

—ಬಾಸಿಂಗಬಲ

“ ನೀವು ಪಡುವ ಶ್ರಮ, ನೀವು ಕೊಡುವ ಮದ್ದು, ನೀವು ನೋಡುವ ರೋಗದ ಸ್ಥಿತಿಗತಿ, ಇವು ಮೂರು ನಿಮ್ಮ ಬೇಡಿಕೆಯನ್ನು ಬಂಧಿಸುತ್ತವೆ. ”

“ ಈ ಮೂರರ ಜೊತೆಗೆ ನಾಲ್ಕನೆಯದೂ ಒಂದಿದೆ. ಕೊಡುವವನ ಯೋಗ್ಯತೆ. ”

“ ಮೋರೆಯನ್ನು ಕಂಡು ಮಣೆ ಹಾಕುವಿರಾ ?

“ ಬಾಬೂರಾವ ದೇವರು ಸ್ವರ್ಗದ ಬಾಗಿಲು ತೆರೆದಾಗ ನೀವು ಒಳಗೆ ನುಗ್ಗುವದಿಲ್ಲವೇ ? ”

“ ದೇವರಗುಡಿ ಎಲ್ಲರಿಗೂ ಮುಕ್ತದ್ವಾರವಿದೆ. ಆದರೆ ದೇವರನ್ನು ಕಾಣುವವ ಭಕ್ತನೊಬ್ಬನೇ ”

“ ಅಜಾಮಿಳನು ಕೇವಲ ಸಾಯುವಾಗ ನಾರಾಯಣನೆಂದರೆ ಸ್ವರ್ಗ ಸಿಕ್ಕಿತು. ಬೇಡನು ಬೇಟೆಯ ದರ್ಶನಕ್ಕೆ ಕಡಿದೊಗೆದ ಬಿಲ್ವಪತ್ರ ಅವನಿಗೆ ಮೃಗ ನಕ್ಷತ್ರ ಪುಂಜದಲ್ಲಿ ವ್ಯಾಧನೆಂಬ ಅಮೃತಪದವಿಯನ್ನು ದೊರಕಿಸಿತು. ಇವರ ಭಕ್ತಿ ಯಾವ ಮಟ್ಟದ್ದು ? ”

“ ದೇವರ ನಾಮಸ್ಮರಣೆ ಮತ್ತು ಬಿಲ್ವದಲದ ಮಹತ್ವವನ್ನು ಸಾರಿ ಹೇಳಲು ಹೊರಟ ಕಟ್ಟುಕತೆಗಳವು. ಅವು ಅನಾಯಾಸವಾಗಿ ದೊರೆತ ಅಮೃತಪದವಿಗಳು. ಪರಿಶ್ರಮದ ಫಲಗಳಲ್ಲ. ”

“ ಬಾಬೂರಾವ ನಾನು ಬಾಲಕರಿಗೆ ದಿನಕ್ಕೆ ಆರಾಣೆ, ಪ್ರೌಢರಿಗೆ ಎಂಟಾಣೆ ಆಕರಿಸುತ್ತೇನೆ. ಇದಕ್ಕೆ ಆಧಾರವೇನು ಎಂದು ತಿಳಿದಿದ್ದಿರಿ? ”

“ ನೀವು ಇಡೀ ತಿಂಗಳು ದುಡಿದ ಶ್ರಮ, ವೆಚ್ಚವಾದ ಮದ್ದು ಆಯುಧಗಳ ಸವಕಳಿ, ಆಡಳಿತೆಯ ವೆಚ್ಚ, ನಿಮ್ಮ ಯೋಗ್ಯತೆಗೆ ತಕ್ಕ ಲಾಭವನ್ನು ಕೂಡಿಸಿ ನಿಮ್ಮ ಅಂಕಿತದಲ್ಲಿದ್ದ ರೋಗಿಗಳಲ್ಲಿ ಹಂಚುವಿರಿ. ಅದೇ ಆರಾಣೆ, ಎಂಟಾಣೆಗಳ ಹೊರಮೈ ಕಾಣುವದು. ”

“ ಅಂದಮೇಲೆ ಬಡವನಿಗೂ ಆರಾಣೆ, ಬಲ್ಲಿದನಿಗೂ ಆರಾಣೆ ಹೀರುವದಕ್ಕಿಂತ ಬಡವನಿಗೆ ನಾಲ್ಕಾಣೆ. ಬಲ್ಲಿದನಿಗೆ ಎಂಟಾಣೆ ಜಗ್ಗಿದರೆ

ತಪ್ಪೇನು ? ಅಥವಾ ಬಲ್ಲಿದನ ರೊಕ್ಕದಲ್ಲಿಯೇ ಬಡವನಿಗೆ ಪುಕ್ಕಟೆ ಕೊಡ ಬಾರದೇಕೆ ? ''

'' ಡಾಕ್ಟರ ನಿಮ್ಮಲ್ಲಿ ಹೆರಿಗೆಯ ಕೇಸುಗಳು ಬಂದಿದ್ದವೇ ? "

" ಬಂದಿದ್ದವು. ಯಾಕೆ ? " ಡಾಕ್ಟರರು ಬೆರಗಿನಿಂದ ಕೇಳಿದರು.

" ಹೆರಿಗೆಯು ಸುಲಭವಾಗಬೇಕೆಂದು ನಿಮ್ಮ ಸಹಾಯವಾಗ ಬಹುದು. ನೀವೇ ಹೆರುವದು ಸಾಧ್ಯವೇ ? "

ಡಾಕ್ಟರರು ಬಾಯಿದೆರೆದು ಮನಸ್ಸಿನ ನಕ್ಕರು....ಬಾಬೂನ ಈ ವಾಸ್ತವವಾದವು ಅವರ ಮನಸ್ಸನ್ನು ಬಲವಾಗಿ ವೇಧಿಸಿತು.

ಬಾಬೂರಾವ ನಿಸರ್ಗ ಅವರವರಿಗೆ ಕೆಲವೊಂದು ವಿಶಿಷ್ಟವಾದ ಹಕ್ಕು ಬಾಧ್ಯತೆಗಳನ್ನು, ಗುಣಾವಗುಣಗಳನ್ನು ಕೊಟ್ಟಿದೆಯೆಂಬುದು ನಿಜ ಬಡತನ, ಓಡೆತನ ನಿಸರ್ಗದ ಹುಟ್ಟುವಳಿಯೇನು ? "

'' ನಿಸರ್ಗ ಮಾನವನನ್ನು ಒಳಗೊಂಡಿಲ್ಲವೇನು? "

'' ನಿಸರ್ಗ ಮಾನವನನ್ನು ನಿರ್ಮಿಸುವದು. ನಿಸರ್ಗದ ಮೇಲೆ ಮಾನವನು ಸ್ವಾಮಿತ್ವ ಪಡೆಯುವವನು. ''

'' ಸ್ವಾಮಿ ಮಾನವನೋ, ನಿಸರ್ಗವೋ ಅತಿ ಜಟಿಲವಾದ ಪ್ರಶ್ನೆ. ಆದರೆ ಮಾನವನ ಶಕ್ತಿ, ಸೌಂದರ್ಯ, ಆರೋಗ್ಯ ಮತ್ತು ಬುದ್ಧಿಗಳಲ್ಲಿ ತಾರತಮ್ಯವಿರುವ ವರೆಗೆ ಬಡತನ, ಒಡೆತನ, ಸರಕಾರ ಜನತೆ, ಆಳು ಒಡೆಯ, ದುಡಿಮೆಗಾರ ಬಂಡವಲುಗಾರ ಇವರ ಅಸ್ತಿತ್ವ ಹೇಗೆ ನಾಶವಾಗಬೇಕು. "

'' ನೀವು ಸಮತಾವಾದಿಗಳೆಂದು ನಾನು ತಿಳಿದಿದ್ದೆ. "

'' ಆಧ್ಯಾತ್ಮವಾದಿಗಳು ಸಮತಾವಾದವನ್ನು ಸ್ಥಾಪಿಸಲು ಪೌರಾಣಿಕ ಕಾಲದಿಂದ ಹೆಣಗಿದ್ದಾರೆ. ಅವರಿಗೆ ಸಾಧ್ಯವಾಗಿಲ್ಲ. ಕಾಯಿದೆಯಿಂದ ಸಮತಾವಾದ ಹೇಗೆ ನಿಲ್ಲಬೇಕು? "

'' ಎಲ್ಲರ ಹಕ್ಕು ಬಾಧ್ಯತೆಗಳು ಸಮವೆಂಬ ತತ್ವವನ್ನಾದರೂ ಒಪ್ಪುತ್ತೀರಾ? "

---

—ಬಾಸಿಂಗಬಲ

" ಡಾಕ್ಟರ ನಿಮ್ಮ ದವಾಖಾನೆಯಲ್ಲಿ ಎಷ್ಟು ಜನ ಕುರೂಪಿ ನರ್ಸ ರಿದ್ದಾರೆ. ನಿಮ್ಮ ಕಂಪಾವುಂಡರ ಮಲರೋಗಿಯಾಗಿದ್ದರೆ ನಡೆಯು ವದೇ? "

" ನಿಮ್ಮ ಮಾತುಗಳು ತಿಳಿಯಲಿಲ್ಲ. "

" ಮಾತುಗಳು ಸರಳವಾಗಿವೆ. ಅರ್ಥ ತಿಳಿದಿರಲಿಕ್ಕಿಲ್ಲ. ಡಾಕ್ಟರ ನಮ್ಮ ತಂಗಿ ಕುರೂಪಿಯಾಗಿದ್ದರೆ ನೀವು ಮದುವೆಯಾಗುತ್ತಿದ್ದಿರಾ? "

" ಅಂದರೆ ಏನು ? "

" ಕ್ಷಮಿಸಿ ಡಾಕ್ಟರ. ನನ್ನ ತಂಗಿಯನ್ನು ನೀವು ಆರಿಸಿದುದು ಅವಳ ಚೆಲುವಿಕೆಗಾಗಿ ಎಂದು ನನ್ನ ಅಭಿಪ್ರಾಯ. "

" ಚೆಲುವಿಕೆ, ಜಾಣ್ಮೆ, ಮನೆತನ, ಎಲ್ಲವೂ ಆಯ್ಕೆಯಲ್ಲಿ ಒಳ ಗೊಂಡಿರುತ್ತವೆ. "

" ಆದರೆ ಚರಿತ್ರೆಯಲ್ಲ. "

" ಚರಿತ್ರೆ....ಇಬ್ಬರಿಗೂ ಅನ್ವಯಿಸುವದು... ಚರಿತ್ರೆಯನ್ನು ಯಾಕೆ ಕೆದರಬೇಕು ? "

" ಅದಕ್ಕೆ ಎರಡು ಕಾರಣಗಳಿವೆ. ತನ್ನ ಹೆಂಡತಿಯ ನಡತೆ ಒಳ್ಳೇ ದಿರಬೇಕೆಂದು, ಭಾವೀಸಂತತಿ ಪವಿತ್ರವಾಗಿರಬೇಕೆಂದು. "

" ಭೂತಕಾಲದ ದುಃಖದಾರಿದ್ರ್ಯವನ್ನು ನಾನು ವರ್ತಮಾನ ಕಾಲದಲ್ಲಿ ಕದಡಿಸಲಾರೆ. ....ಬಾಬೂರಾವ ನೀವು ಚಿಕ್ಕವರಿದ್ದಾಗ ಹೊಲಸು ಮೈಗೆ ಬಡಿದುಕೊಂಡಿಲ್ಲವೇ? ಹೊಲಸು ಕಿವುಚಿಲ್ಲವೇ? "

" ಕಿವುಚಿರಬಹುದು. "

" ಆಗ ಹೊಲಸು, ರುಚಿ, ಭೇದ ತಿಳಿಯದಿದ್ದಾಗ ಅನುಚಿತಕೃತಿ ಗಳು ಆಗಿರಬಹುದು. ಈಗಲೂ ಆಗಬೇಕೆಂದು ನಿರ್ಬಂಧವೇನು? "

" ಕೃತಿಗೆ ಮನಸ್ಸಿನ ಒಲವುನಿಲುವುಗಳು ಮಾತ್ರ ಬಣ್ಣ ಕೊಡು ತ್ತವೆ. "

" ಅಂದರೇನು ? "

"ನಾನು ಚಿಕ್ಕವನಿದ್ದಾಗ ನಮ್ಮ ತಾಯಿ ನನ್ನ ಮೈದಡವಿರಬಹುದು. ಈಗ ಮೈ ದಡವಲು ಯಾಕೆ ಹಿಂಜರಿಯಬೇಕು? "

"ಅಹುದು. ಯಾಕೆ? "

"ಕಾರಣ ಪ್ರಪಂಚ ನನಗೂ ಹೊಸದು. ಆದರೂ ಕೃತಿಗಳ ಹಿಂದಿನ ಮನಸ್ಸಿನ ರೂಪವೇ ಇರಬೇಕು."

"ಅಂದರೆ ಚಿಕ್ಕವನಿದ್ದಾಗ ಇದ್ದ ಪಾವಿತ್ರ್ಯ ಮುಂದೆ ಉಳಿಯಲಾರದೋ? "

"ಉಳಿಯುಬಹುದು. ಆದರೆ ಅದು ಮನಸ್ಸಿನ ದಾರ್ಢ್ಯದಮೇಲೆ ಅವಲಂಬಿಸಿದೆ."

"ನಿಮ್ಮ ಕಾರಣಮೀಮಾಂಸೆ ನನಗೇನೋ ಒಗ್ಗಲಾರದು. ಆದರೆ ನಾನು ಇಷ್ಟುಮಾತ್ರ ಹೇಳಬಲ್ಲೆ. ನನ್ನ ಹೆಂಡತಿ ನಾನು ಮದುವೆಯಾದಾಗಿನಿಂದ ನನ್ನ ಜೊತೆಗೆ ನಂಬಿಗಸ್ತಳಾದರೆ ಸಾಕು. ಅವಳ ಹಿತರ ಪಿತರಗಳಗೊಡವೆ ನಾನು ಕೆಣಕುವದಿಲ್ಲ. ಅದು ನನಗೆ ಬೇಡ. ಬೇಕಾದರೆ ನೀವು ನನಗೆ ಹೀನಸಂಸ್ಕೃತಿಯವನೆಂದರೂ ಅಡ್ಡಿಯಿಲ್ಲ"

"ಡಾಕ್ಟರ ಈ ಮಾತುಗಳು ನಮ್ಮ ಹಿಂದೂಸಂಸ್ಕೃತಿಗೆ ಸಲ್ಲುವದಿಲ್ಲ."

"ಒಳ್ಳೇದು. ತಿಳಿಯಿರಿ. ಒಂದು ದಂಪತಿಯಿದೆ. ಹೆಂಡತಿಯ ನಡತೆ ನೆಟ್ಟಗಿರಲಿಲ್ಲವೆಂದು ಮದುವೆಯ ತರುವಾಯ ಗಂಡನಿಗೆ ತಿಳಿದುಬಂದದೆ. ಅವನು ಏನು ಮಾಡಬೇಕು? "

"ವಿವಾಹವಿಚ್ಛೇದ ಮಾಡಬೇಕು."

"ಮದುವೆಯಾದಂದಿನಿಂದ ಅವಳ ನಡತೆ ಸ್ಥಿಮಿತಕ್ಕೆ ಬಂದಿದೆ. ಅವನ ಸಾನಿಧ್ಯದಲ್ಲಿ ಅವಳು ಕೆಡಲಾರಳೆಂದು ಅವನಿಗೆ ತಿಳಿದಿದೆ."

"ಇದಕ್ಕೆ ಆಧಾರವೇನು? "

"ನಿಮಗೆ ಅವಳ ಬಗೆಗೆ ಸಂಶಯಬಂದರೆ, ಬಂದ ಸಂಶಯದೃಢವಾದರೆ ನೀವು ಅವಳನ್ನು ಆಕ್ಷಣ ಬಿಡಬಹುದಲ್ಲ. ಅವಳ ಹಿಂದಿನ ನಡತೆ ಮುಂದಿನ ನಡತೆಗೂ ಸಾಕ್ಷಿಯಾಗಬಲ್ಲದೇನು? "

---

—ಬಾಸಿಂಗಬಲ

" ಕೊಳೆತ ಮಾವಿನಹಣ್ಣು ತಿನ್ನಲು ಯೋಗ್ಯವಲ್ಲ ಡಾಕ್ಟರ. "

" ನಾವು ಡಾಕ್ಟರರು ಬಾಬೂರಾವ. ಕಾಲು ಕೊಳೆತರೆ ಜೀವ ಕೊಲ್ಲುವದಿಲ್ಲ. ಘಾತುಕವಾದ ಭಾಗ ಕಡಿದರೆ ಜೀವಕ್ಕೆ ಅಪಾಯವಿಲ್ಲ."

" ಇಡಿಯ ಹಣ್ಣಿನ ಚೆಲುವು ಕಡಿದ ಹಣ್ಣಿಗೆ ಬರುವದೇ? "

" ಬರಲಿಕ್ಕಿಲ್ಲ. ಆದರೆ ಕಡಿದ ಭಾಗ ಉಳಿದ ಹಣ್ಣು ಕೆಡಿಸುವದಕ್ಕಿಂತ ಕಡಿದ ಭಾಗ ಕಿತ್ತಿದರೆ ಉಳಿದ ಭಾಗಕ್ಕೆ ಅಪಾಯವಿಲ್ಲ. "

" ನಿಮ್ಮ ತರ್ಕ ಸರಿಯಾದುದಲ್ಲ. "

" ಸರಿಯೋ, ಬಿರಿಯೋ, ನನಗೆ ತಿಳಿಯದು. ಆದರೆ ಅನುಭವದಿಂದ ಒಂದು ಮಾತನ್ನು ಅಥವಾ ತತ್ವವನ್ನು ನಾನು ಅರಗಿಸಿದ್ದೇನೆ. ಅದೆಂದರೆ ಮರೆಯುವದು. ನಮ್ಮ ವರ್ತಮಾನದ ಸುಖಕ್ಕೆ ಭೂತಕಾಲದ ಮನವು ಅಮೃತಪಾನ. ಹಾಳು ದೇಗುಲದಲ್ಲಿ ಕುಳಿತು ಹಿಂದಿನ ವೈಭವ ನೋಡಿ ಕಣ್ಣೀರಿಡುವದಕ್ಕಿಂತ, ದೇಗುಲ ಕೆಡವಿ ಅದರ ಕಲ್ಲು ಮಣ್ಣಿನಿಂದ ನಾನು ಹೊಸ ದೇಗುಲ ರಚಿಸುವವ. ಜನರು ನನಗೆ ಕಟುಕನೆನ್ನಬಹುದು. ಆದರೆ ನನಗೆ ದುಃಖವಿಲ್ಲ. ನಾನು ನಾಸ್ತಿಕನಲ್ಲ. "

" ಡಾಕ್ಟರ ನಿಮ್ಮ ವೈಭವ, ಸುಖ, ದುಃಖ ನಿಮ್ಮ ಸ್ವತ್ತು. ನನಗೆ ಅದರಲ್ಲಿ ಪಾಲು ಸಿಗಲಾರದು. ಆದರೆ ಮಡುವಿನಲ್ಲಿ ಧುಮುಕುವಾಗ ಹತ್ತಿರದ ಹೆಳೈಯವನನ್ನು ಕೇಳಿ ಅದರ ಆಳ, ಅಂಜಿಕೆಗಳನ್ನು ತಿಳಿದರೆ ನಿಮಗೂ ಈಜಲು ಅನುವು, ಆತ್ಮವಿಶ್ವಾಸಗಳು ದೊರಕುವವು. "

" ಬಾಬೂರಾವ ನಿಮ್ಮ ಮಾತು ನನಗೆ ಸೋಜಿಗವೆನಿಸುವದು. ತಂಗಿಯ ದುರ್ಗುಣ ಮುಚ್ಚಿ ಮದುವೆ ಮಾಡುವವರು ಹಲವರು. ನೀವು ಕುಂದು ಪ್ರದರ್ಶಿಸಿ ಒಪ್ಪಿದ ಅಳಿಯನನ್ನು ಬಿಡಿಸಲು ಪ್ರಯತ್ನಿಸುವಿರಿ.... ವಿಚಿತ್ರ.... "

" ಡಾಕ್ಟರ ನಿಮ್ಮ ಮಾತು ಮರೆತವೇನು ? "

" ಏನು ? "

" ಬೆಳಗಿನ ಸತ್ಯಧಾರಿಗಳು ಎಂಬ ಮಾತುಗಳು. "

“ ಬಾಬೂರಾವ ಅದೇನೇ ಇರಲಿ. ನಿಮ್ಮ ಅನ್ವರ್ಥಕನಾಮವನ್ನು ನಾನು ಅಭಿನಂದಿಸುತ್ತೇನೆ. ಆದರೆ ನನ್ನ ದೈವ ನನಗೆ ಬಿಡಿರಿ. ಚೆಲುವಿಕೆಗೋ, ವಿದ್ವತ್ತಿಗೋ, ಬೆಡಗಿಗೋ, ಬಿನ್ನಾಣಕ್ಕೊ, ಅಥವಾ ಎಲ್ಲದಕ್ಕೋ ಮನಸೋತದ್ದು ನಿಜ. ಸೋತಮನಕ್ಕೂ ಜಡತ್ವ ಸುಂಕುರೋಗ. ಸೋತು ಸುಣ್ಣವಾದುದಕ್ಕೆ ಪ್ರತಿಕ್ರಿಯೆ ಇಲ್ಲವೆಂತಲ್ಲ. ದರ್ಶನಕ್ಕೆ ಕಂಡ ಆಲಸ್ಯ ಸುಪ್ತತೇಜಸ್ಸಿನ ಪ್ರತೀಕ. ಪರಿಪೂರ್ಣ ಪರಾಭವ ಹೊಂದಿದಾಗ ಸಮಯ ಸಾಧಿಸಿ ಕಣ್ಣು ತೆರೆವುದು. ಕಣ್ಣು ತೆರೆದಾಗ ಗಾಳಿ ಬೀಸುವದು ಭಯವಲ್ಲ. ಕುಳಿರಿನಿಂದ ಮೈ ಕುಟುಕಿದಾಗಲೇ ಅನಾರೋಗ್ಯದ ಅವತಾರವಾಗುವದು. ಏನಿದ್ದರೂ ನಿಂತ ಮನಸ್ಸಿಗೆ ನೇಲಮೀಟಿದಾಗಲೇ ದುರ್ಭೀತಿಯು ಜನನವಾಗುವದು. ಗಾಳಿಯ ಕಂಪನ, ಕಿರಣಗಳ ಕಾವು, ಚಳಿಯ ಚುಟುಕುಗಳು, ಗಾಳಿಗೋಪುರದ ಪಿಸುಮಾತುಗಳು. ಗಾವಿಲರಿಗೆ ಭಯ ಬಲ್ಲಿದರಿಗೆ ಅಭಯ ಕೊಡುತ್ತವೆ. ನೆಲವೇ ನಿಂತು ಬಡಿದಾಗ ಅವರಿಗೆ ಪೆಟ್ಟು. ಆದ್ದರಿಂದ ನನಗೆ ನನ್ನ ಭವಿತವ್ಯದ ನಿಬಂಧ ಬರೆಯಲಿಕ್ಕೆ ಅವಕಾಶ ಕೊಡಿರಿ. ಅಗ್ರಾಹ್ಯವಾದಾಗ ನಿಮ್ಮ ಮೋರೆಯ ಬಣ್ಣ ಸತ್ಯ. ಇಲ್ಲವಾದರೆ ನನ್ನ ಮಾತುಗಳು ಭವಿತವ್ಯದ ಪವಾಡ. ”

“ ಆಗಲಿ ಡಾಕ್ಟರ....ನಿಮ್ಮ ಪ್ರವಾಹ ರಭಸಕ್ಕೆ ನಾನು ಆಣೇಕಟ್ಟಲ್ಲ. ನಾನು ದಂಡೆಗೆ ನಿಂತು ನೋಡುತ್ತೇನೆ....ಆಗಲಿ ನಾನು ಹೊರಡುತ್ತೇನೆ. ”

ಆಳು ಒಂದು ಟ್ರೇ ತಂದು ತ್ರಿಕೋಣ ಮೇಜಿನ ಮೇಲಿಟ್ಟನು.

“ ಏನೋ ತಂದಿದ್ದಾನೆ....ಕುಡಿದು ಹೋದರೆ ಸರಿ. ”

“ ಈಗಲೇ ಊಟವಾಗಿದೆಯಲ್ಲ ”

“ ಊಟವಾದ ಅರ್ಧ ತಾಸಿನ ಮೇಲೆ ನೀರು ಕುಡಿಯಬೇಕು. ”

“ ಡಾಕ್ಟರರ ಸಲಹೆಗೆ ಒಪ್ಪಲೇಬೇಕು ”

“ ನೀರಿನಲ್ಲಿ ತುಸು ಸಕ್ಕರೆ ಬೆರೆಯಿಸುವ ಪರಿಪಾಠ ನಮ್ಮಲ್ಲಿದೆ. ”

“ ಮೇಲೆ ತುಸು ಕಾಫಿಪುಡಿ ಚಿಮುಕಿಸುವ ರೂಢಿಯೂ ಇರಬಹುದು. ” ಬಾಬೂ ನಗುತ್ತ ಅಂದನು.

---

—ಬಾಸಿಂಗಬಲ

" ಅಹುದು.. ಬಣ್ಣ ಬರಲೆಂದು ತುಸು ಹಾಲು ಹಾಕಲಾಗಿದೆ. " ನಗುತ್ತ ಡಾಕ್ಟರರೆಂದರು.

" ಇದು ಬಣ್ಣದ ಕಾಫೀ ಮಾಡುವ ಪರಂಪರೆ. " ಬಾಬೂ ಪೊಳ್ಳನೇ ನಕ್ಕನು.

ಡಾಕ್ಟರರೂ ಅವನ ನಗೆಯಲ್ಲಿ ಪಾಲುಗಾರರಾದರು. ಸೊಕ್ಕಿಗೇರಿದ ಕಾಫಿ ಮಾತ್ರ ಇವರ ಆನಂದದಲ್ಲಿ ಪಾಲುಗಾರನಾಗಲಾರದೆ ನಿರಾಶೆಯಿಂದ ತಣ್ಣಗಾಗಹತ್ತಿತು. ಇಬ್ಬರ ನಗೆಯ ಸೆಳಕು ತೀರಿದ ಮೇಲೆ ಒಂದೊಂದೇ ಗುಟುಕು ಕುಡಿದು, ಬಿಸ್ಕೀಟನ್ನು ಅದ್ದಿ ಕಾಫಿಯ ರುಚಿಯ ಸಿಹಿ ಲೇಪನವನ್ನು ನಾಲಿಗೆಗೆ ನೇವರಿಸುತ್ತ ಕಾಫಿ ಕುಡಿದರು. ಅಡಕೆಯ ಒಂದೆರಡು ಹೆಳಕುಗಳನ್ನು ಬಾಯಲ್ಲಿ ಚಲ್ಲಿ ಬಾಬೂ ಹೊರಡಲನುವಾದನು. ಡಾಕ್ಟರರು ಅವನನ್ನು ತಲೆಬಾಗಿಲದವರೆಗೂ ಕಳಿಸಿ ತಿರುಗಿದರು.

---

## ೬ ಅಪೂರ್ಣ ರೋಗ. * * *

ಬಾಬೂ ಹೊರಗೆ ಹೊರಟಾಗ ಬೆಳಗಾವಿಯ ಸೌಭಾಗ್ಯ ಸೌಂದರ್ಯವು ಮಾರುತಿಯ ಸನ್ನಿಧಾನದಲ್ಲಿ ಸನ್ನಿಹಿತವಾಗುವ ಸಮಯ ಸಾಧಿಸುತ್ತಿತ್ತು. ವಿವಿಧ ದೃಷ್ಟಿಗಳ ಸಮ್ಮೇಲನದಲ್ಲಿ ಸುಖದುಃಖಗಳ ಸಮೀಕರಣವಾಗುತ್ತಿತ್ತು. ಚುಟುಕು ನೋಟಗಳ ಚಂಚಲತೆ, ದೀರ್ಘಸ್ನೇಹದ ಅಗಾಧತೆಗಳು ಸುಖದುಃಖಗಳನ್ನು ತೋಡಿಕೊಂಡು ಸಂಜೆಯ ಮಹಾಯುದ್ಧಕ್ಕೆ ಶಸ್ತ್ರಾಸ್ತ್ರಗಳನ್ನು ಸಂಗ್ರಹಿಸಿ ಸನ್ನದ್ಧವಾಗುತ್ತಿದ್ದವು. ಮನೆಯ ವಾತಾವರಣ ಕೆಟ್ಟಾಗ ಹನುಮನ ಗರ್ಭಗುಡಿ ಶಾಂತಿಯನ್ನು ತರುತ್ತಿತ್ತು. ಮನೆಯಲ್ಲಿ ಸುಖವಿದ್ದಾಗ ಹನುಮ ದೇವರಾಗುತ್ತಿದ್ದನು. ಸುಖದುಃಖಗಳ ತಾರತಮ್ಯವಿಲ್ಲದವರು ದೇವರ ಪಾವಿತ್ರ್ಯದ ಗಣನೆಯನ್ನು ತಂಬಾಕದ ಹೊಗೆಯಿಂದ, ತಾಂಬೂಲದ ಥಳಿಯಿಂದ, ತಂಗುಳೂಟದ ಅಗಳುಗಳಿಂದ, ಪಾದರಕ್ಷೆಗಳ ಧೂಲಿಯಿಂದ, ಅತಿ ಶೃಂಗಾರದ ಅಂಗರಕ್ಷೆಗಳಿಂದ ಅಳೆಯುತ್ತಿದ್ದರು.

ಆ ನಿಸ್ಸೀಮದೇವತೆಯನ್ನು ಎಡಗೊಂಡು ಬಾಬೂ ಹಾಗೇ ಮುಂದೆ ಸಾಗಿದನು. ಮಹಾದೇವನ ಕತ್ತರಿಗೆ ಅವನ ಕತ್ತು ಸಹಜವಾಗಿ ಎಡಕ್ಕೆ ಹೊರಳಿತು. ಆದು ಲೋಹಚುಂಬುಕದ ಆಕರ್ಷಣವೇ ಸರಿ ಹೊರಳಿದ ಕತ್ತಿಗೆ, ಕಣ್ಣುಗಳ ನೋಟಕ್ಕೆ ನಿಂತ ನಿಲವು, ಸೆಡೆದ ಆಕೃತಿಗಳು ಕಂಡವು. ಆಕಾರದ ಜೊತೆಗೆ ಮೋರೆಯು ಮೇಲೆ ವಿವಿಧ ರಂಗಗಳು ಬುದ್ಬುದ ಗೊಂಡವು. ಸೋಜಿಗದ ಛಾಯೆ ಮೂಡಿ ಸಂತೋಷದ ದಿಟ್ಟತನದಲ್ಲಿ ಮೂರ್ತಸ್ವರೂಪಗೊಂಡಿತು. ಬಾಬೂನ ಪುಲಕಿತ ದೇಹಕ್ಕೆ ದೇಹವಿಡುವ, ನಗುವ ಮುಖಕ್ಕೆ ಮುಖವಿಡುವ ಚಿಲುವಿನ ನೇಹ ಎದುರಿಸಿತು. ಬಾಬೂನ ಎದುರಿಗೆ ಹಠಾತ್ತಾಗಿ ವಿಮಲೆ ಬಂದು ನಿಂತಳು.

"ಕೊನೆಗೆ ದಾರಿ ತಿಳಿಯಿತಲ್ಲ." ವಿಮಲೆ ನುಡಿದಳು.

"ವಿಮಲಾ ಇದು ಅನಿರೀಕ್ಷಿತ ದಾರಿ." ಬಾಬೂ ಮರುನುಡಿದನು

"ಅನಿರೀಕ್ಷಿತ ದಾರಿಯಿದ್ದರೂ ಅದು ನಾವೇ ತೋಡಿದುದಲ್ಲ ವೇನು?" ವಿಮಲಾ ಅಂತಃಕರಣ ನಡುಗಿ ನುಡಿದಳು.

"ವಿಮಲಾ ಇಂಥ ಮಾತುಗಳಿಗೆ, ಮನೆಯ ಮಾಯೆ, ಇಲ್ಲವೆ ಗಿಡದ ಛಾಯೆ ಬೇಕು"

"ಮತ್ತು ನಿತಾಂತ ರಮ್ಯ ಸನ್ನಿವೇಶ ಬೇಕು, ಅಲ್ಲವೇ?" ವಿಮಲಾ ಅಂದಳು. "ಹೀಗೇಕೆ ದೇಸಿಗನಾಗಿ ಮಾತನಾಡುವಿ ಬಾಬೂ, ನಮ್ಮ ಮನೆ ಯಿದೆ, ನಿಮ್ಮ ಮನೆಯಿದೆ, ನೇಹದ ಬಲವಂತನ ಮನೆಯಿದೆ...."

"ಮನೆಗೆ ಹೋಗಲೋ ಬೇಡವೋ ಎಂದಿದೆ."

"ಹಾಗಾದರೆ ನಡೆ ತಿರುಗಾಡಿ ಬರುವಾ."

"ಯಾವ ಕಡೆಗೆ?"

"ಸ್ಥಳ ನಾನೇ ಆರಿಸಬೇಕೇ?"

"ಸ್ಥಳ ನೋಡುವದು ಹೆಂಗಸರದೇ ಅಲ್ಲವೇನು?"

"ಮೊದಲು ಸ್ಥಳ ಗೊತ್ತುಪಡಿಸುವದು. ಹೆಣ್ಣು ಮಕ್ಕಳಿಗೆ ಹಿಂದು ಗಡೆ ಸ್ಥಳ ಗಂಡಸರೇ ಹುಡುಕುತ್ತಾರೆ."

—ಬಾಸಿಂಗಬಲ

" ವಿಮಲಾ ನನ್ನ ಮನಸ್ಸು ಎರಡು ಬಗೆದಿಲ್ಲ. "

" ನನ್ನ ಹೃದಯದ ಕದ ಯಾವಾಗಲೂ ನಿನಗೆ ಸ್ವಾಗತವೀಯುತ್ತದೆ."

" ಹಾಗಾದರೆ ಅಡ್ಡಿಯೆಲ್ಲಿ? "

" ಜೋಯಿಸರದೇ ಅಡ್ಡಿ. " ವಿಮಲಾ ನಗುತ್ತ ಅಂದಳು.

" ವಿಮಲಾ ನಮ್ಮ ತಾಯಿಯ ಅಮೃತಸಿದ್ಧಿ ಇಂದು ನಡೆಯಿತು."

" ಕಮಲೆಯ ಮದುವೆ ಇಂದಿನಿಂದ ಹದಿನೈದು ದಿನಕ್ಕೆ. "

" ಯಾರ ಕೂಡ? "

" ಡಾಕ್ಟರ ಪರಮಾಜರ ಕೂಡ. "

" ಡಾಕ್ಟರ ಪರಮಾಜ! ಕೊನೆಗೂ ಕಮಲೆ ಭಾಗ್ಯವಂತಳು.........ಧೀರ? "

" ಅವನದೂ ಕೂಡಿದಂತೆಯೋ! "

" ಮತ್ತೆ ಬಾಬೂನದು! "

" ಅವನದೇ ಒಂದು ಬಿಗುವಿನದು ನೋಡು. " ಬಾಬೂ ಓರೆಗಣ್ಣಿನಿಂದ ನೋಡುತ್ತ ಅಂದನು.

" ಬಾಬೂ ನಂಬಿ ಕೆಟ್ಟವರಿಲ್ಲ. "

" ನಂಬಬೇಕೋ ಬಾರದೋ ಎನ್ನುವದೇ ದೊಡ್ಡ ಸಮಸ್ಯೆಯಾಗಿದೆ."

" ಯಾಕೆ ಸಂಶಯ ಬಂದಿತೇನು? "

" ಆಧಾರಗಳ ಮೊದಲೇ ಸಂಶಯ ಬರುವುದು ಹೇಗೆ? " ಎಂದು ನುಡಿದು ಬಾಬೂ ಸಮೀಪದ ಆಸನದ ಮೇಲೆ ಕುಳಿತನು. ತುಸು ಅಂತರದ ಮೇಲೆ ಎದುರಾಸನದ ಮೇಲೆ ವಿಮಲಾ ಕುಳಿತಳು.

ಗುಡಿಗೋಪುರಗಳ ಮೇಲೆ ಸೂರ್ಯ ಇನ್ನೂ ಹೊಳೆಯುತ್ತಿದ್ದನು. ನಿಮಿರಿ ನಿಂತ ವನಸ್ಪತಿಗಳು ಇನ್ನೂ ಸಕ್ಕರೆನಿದ್ದೆಯಿಂದ ಚೇತರಿಸಿಕೊಂಡಿರಲಿಲ್ಲ. ಕೆಲವು ಹಟಮಾರೀ ಆಟಗಾರರ ಹೊರತು ಆ ವಿಸ್ತೀರ್ಣವಾದ ಬಯಲಾಗಾರದಲ್ಲಿ ಒಂದು ಜೀವವೂ ವಿರಾಮಹೊಂದುತ್ತಿರಲಿಲ್ಲ. ಗಿಡಗಳ ಉದ್ದಂಡ ಛಾಯೆಗಳು ಆಗಲೇ ಮೂಡಲುದ್ಯುಕ್ತವಾಗಿದ್ದವು. ಬೆಳೆದರೂ

ಬಲಿತ ಮೋಡಗಳಲ್ಲಿ ಇನ್ನೂ ಬಲ ಬಂದಿರಲಿಲ್ಲ. ಆದುದರಿಂದ ಅಲಂಕಾರಕ್ಕೆಂದು ಬಾನಕೊರಳಿನಲ್ಲಿ ತೆಕ್ಕೆಬಿದ್ದಿದ್ದವು. ಅಸಹಾಯಶೂರವಾದ ದೆವ್ವಗಾಳಿಯು ಅಲ್ಲಲ್ಲಿ ಎದ್ದು ಓಡಲಾರದವರಿಗೆ ಹೆದರಿಸುತ್ತಿತ್ತು. ಬಾಬೂ ವಿಮಲಾನನ್ನೊಮ್ಮೆ ನೋಡಿ ಮುಂದುವರೆದನು.

" ವಿಮಲಾ ನೀನು ನನ್ನನು ನಿಜವಾಗಿಯೂ ಪ್ರೀತಿಸುತ್ತೀಯಾ? "

ವಿಮಲೆಗೆ ಅಚ್ಚರಿಯಾಯಿತು. ಪ್ರಶ್ನೆ ಸರಲವಿದ್ದರೂ ಅದನ್ನು ನೇರವಾಗಿ ಉತ್ತರಿಸಲು ಅವಳಿಗೆ ಆಗಲೊಲ್ಲದು.

" ಪ್ರೀತಿಯ ಆಳತೆಗೋಲಿದ್ದರೆ ಅಳೆದು ನೋಡು.... ಅದಿರಲಿ ನೀನು ಹೀಗೆ ಕೇಳಲು ಕಾರಣವೇನು? " ವಿಮಲೆ ಅಂದಳು.

" ಇದೇ ...ಕಾರಣವಿದೆ. ನಮ್ಮ ಮುಂದಿನ ಮಾತುಗಳಿಗೆ ಇದು ಪ್ರಸ್ತಾವ. "

" ನಿನ್ನ ಸಲುವಾಗಿ ನಾನು ಯಾವ ತ್ಯಾಗವನ್ನಾದರೂ ಮಾಡಲು ಸಿದ್ಧಳು. "

" ಅದು ನನಗೆ ಗೊತ್ತು....ಅದಿರಲಿ ವಿಮಲಾ....ಈಗ ನೀನು ಕಾಲೇಜದ ಮೊದಲ ವರ್ಷದಲ್ಲಿದ್ದೀಯಾ? "

ಈ ಪ್ರಶ್ನೆಯಿಂದ ಅವಳಿಗೆ ಇನ್ನಿಷ್ಟು ದಿಗಿಲಾಯಿತು. ಪ್ರಶ್ನೆಯ ಹೊಲಬು ಅವಳಿಗೆ ತಿಳಿಯುಲಿಲ್ಲ. ಅವನಿಗೆ ಕಾಲೇಜ ಶಿಕ್ಷಣ ಸರಿಬರಲಾರದೆಂಬ ಒಂದು ಸಲ ಸಂಶಯ ಬಂದರೆ ಇನ್ನೊಂದು ಸಲ ಪ್ರೇಮಕ್ಕೆ ಇದಕ್ಕೆ ತಳಕುಮಳಕು ಹಾಕುವ ಅವನ ಗುರಿ ತಿಳಿಯುಲಿಲ್ಲ. ನಿರುಪಾಯಳಾಗಿ ಅವಳು ಉತ್ತರಿಸಿದಳು.

" ಅಹುದು....ಬಾಬೂ ಏನೇನು ವಿಚಿತ್ರ ಪ್ರಶ್ನೆ ಕೇಳುವಿಯಲ್ಲ; ಇಂದು ನಿನಗೆ ಆದುದಾದರೂ ಏನು? "

" ಏನೂ ಇಲ್ಲ....ಕೇಳು ವಿಮಲಾ...ಕೇಳು ನೀನು ಕಲಿತು ಪದವೀಧರಳಾಗಬೇಕೆನ್ನುವಿ....ಅಹುದೇ? "

" ಪದವಿ ನಿನಗೆ ಬೇಡವಾಗಿದ್ದರೆ.......ನಾನು ಇಂದೇ ಕಾಲೇಜಿಗೆ ಶರಣು......."

— ಬಾಸಿಂಗಬಲ

" ಬೇಡ ವಿಮಲಾ... ಕಲಿ.... ಗಂಡನಿಗಿಂತ ಹೆಂಡತಿ ಹೆಚ್ಚು ಕಲಿತರೆ ಅದರಿಂದ ಗಂಡನ ಮರ್ಯಾದೆಗೆ ಭಂಗವಿಲ್ಲ. "

" ಬಾಬೂ.... "

" ಕೇಳು ವಿಮಲಾ. ಪದವೀಧರಳಾಗಿ ನೀನು ನೌಕರೀ ಮಾಡುವವಳು. ನಾನು ಕೈಯಲ್ಲಿ ಕುಡಗೋಲು ಹಿಡಿದು ಬಾಟಕೊಯ್ಯುವವ. ಆಕಳು ಅಟ್ಟದ ಮೇಲೆ ಕರುವು ಬೆಟ್ಟದ ಮೇಲೆ. "

" ಅಮೇರಿಕೆಯಲ್ಲಿ ಜನ ಫೋನಿನಿಂದ ಲಗ್ನವಾಗುತ್ತಾರೆ."

" ಪೂರ್ವ ಪಶ್ಚಿಮದ ಸಂಸ್ಕೃತಿಯ ಕಲಬೆರಕೆ ಸದ್ಯ ಬೇಡ ವಿಮಲಾ. ಹೇಳು.... ನೀನು ಪದವೀಧರಳಾಗಿ ಹಳ್ಳಿಗೆ ಬರುವಿಯಾ? "

" ಅಹಾ. ಆ ಹಳ್ಳಿ! ಅಲ್ಲಿಯ ನೀತಿ... ಅಲ್ಲಿಯ ರೀತಿ ನನಗೆ ಒಂದೂ ಒಗ್ಗುವದಿಲ್ಲ "

" ಅಹುದು. ಇದು ಸತ್ಯಮಾತು. "

" ಬಾಬೂ ನೀನು ನಿನ್ನ ಇಷ್ಟದಂತೆ ಸಮಾಜಸೇವೆ ಮಾಡು. ನಾನು ನನ್ನ ಇಷ್ಟದಂತೆ ಸಮಾಜಸೇವಾನಿರತಳಾಗುವೆ. ನಮ್ಮ ದಾಂಪತ್ಯಜೀವನದಲ್ಲಿ ಕೊರತೆಯೆಲ್ಲಿ? "

" ಹೆಂಡತಿಯು ಗಂಡನ ಸಹಚರಳು. "

" ಅಂದರೆ ಗಂಡ ಗೆರೆ ಹಾಕಿದ ಕ್ಷೇತ್ರದಲ್ಲಿಯೇ ಅವಳು ತುಳಿಯಬೇಕೇನು? "

" ತುಳಿಯದೇ ವಿಧಿಯಿಲ್ಲ. "

" ಗಂಡ ಹೆಂಡಿರು ಬೇರೆಬೇರೆ ಖಾತೆಯಲ್ಲಿ ನೌಕರಿಮಾಡುತ್ತಿರುತ್ತಾರೆ. ಆದರೂ ಅವರ ದಾಂಪತ್ಯ ಜೀವನ ಸುಖಕರವಾಗಿದೆ. "

" ನೌಕರಿ ಎನ್ನುವದು ಒಂದು ಉದ್ಯೋಗ. ಖಾತೆಗಳು ಆಡಳಿತೆಯ ವಿಭಜನೆ ಮಾತ್ರ. "

" ಅಂದರೆ ನಾನು ಹಳ್ಳಿಗೆ ಬಂದು ನಿನ್ನ ಬೆನ್ನಹಿಂದೆ ಬುತ್ತಿ ಹರಬೇಕೇನು? "

“ಬೇಡ! ಬೇಡ! ನೀನು ಕಳೆ ಕೀಳಬೇಡ. ಕೂರಿಗೆ ಹಿಡಿಯಬೇಡ ನಿನಗೆ ಹೊಲ ದೂರ ಇರಲಿ. ಆದರೆ ರೋಗಿಗಳಿಗೆ ಔಷಧಿ ಕೊಡು. ಅಜ್ಞಾನಿ ಹೆಂಗಸರಿಗೆ ಜ್ಞಾನಬೋಧೆ ಮಾಡು. ನಿನ್ನ ಉದಾತ್ತಜೀವನದಿಂದ ಹಳ್ಳಿಯ ನೀತಿ ಎತ್ತರಿಸಲಿ. ಒಂದು ಹಳ್ಳಿ ನಿನ್ನಿಂದಲೇ ಎತ್ತಿದರೆ ಇದಕ್ಕಿಂತ ಹೆಚ್ಚಿನ ರಾಷ್ಟ್ರಸೇವೆ ನಿನ್ನಿಂದ ಆಗಬೇಕಾದುದೇನು?”

“ಬಾಬೂ ನಿನ್ನ ಹೆಂಡತಿಯಾಗಿ ಆ ಅನೀತಿಯ ಕಗ್ಗತ್ತಲೆಯಲ್ಲಿ ತೊಳಲಾಡುವದಕ್ಕಿಂತ ನೀನು ಎತ್ತರಿಸಿದ ಹಳ್ಳಿಗೆ ನಾನು ಪರಿಚಾರಿಕೆಯಾಗಿ ಬರುವೆನು.”

“ವಿಮಲಾ!”

“ಬಾಬೂ ಪ್ರೇಮವನ್ನು ಮಡಿಮೆಯ ಹಿನ್ನೆಲೆಯಲ್ಲಿ ಯಾರೂ ಅಳೆಯುವದಿಲ್ಲ.”

“ವಿಮಲಾ ನಿನಗೆ ಕಾಲೇಜಶಿಕ್ಷಣ ಏಕೆ ಬೇಕು?”

“ನಿನಗೆ ಬೇಡವೆಂದರೆ ಬಿಡುತ್ತೇನೆ ಎಂದೆನಲ್ಲ.”

“ಹಾಗಾದರೆ ಕಲಿಯುವದಕ್ಕೆ ಉದ್ದೇಶವಿಲ್ಲವೇನು?”

“ತಾಯಿ ಕೈ ನಿಂತಾಗ ನನಗೊಂದು ತುತ್ತಿಗೆ ಆಸರವಾಗಲೆಂದು.”

“ನಿನ್ನ ಒಂದು ಜೀವಕ್ಕೆ ನೀನು ಇಷ್ಟೊಂದು ಮುಂಧೋರಣೆಯ ಯೋಜನೆ ಮಾಡಿದ್ದೀ. ನಾನು ಒಂದು ಕುಟುಂಬದ ಯೋಜನೆ ಮಾಡುವಾಗ ಮುಂದೆ ನೋಡಬಾರದು ಎಂದರೆ ಹೇಗೆ?”

“ಆದರೆ ನಿನ್ನ ವ್ಯವಸಾಯ ನನ್ನಮೇಲೆ ಒತ್ತಾಯವೇಕೆ?”

“ಒತ್ತಾಯವಿಲ್ಲ ವಿಮಲಾ. ಭಾರತಿಯ ಪ್ರಜಾರಾಜ್ಯದಲ್ಲಿ ಪ್ರತಿಯೊಬ್ಬ ನಾಗರಿಕನೂ ತನ್ನ ಭವಿತವ್ಯ ನಿರ್ಧರಿಸಲು ತಾನು ಸ್ವತಂತ್ರನು. ಆದರೆ ನನ್ನ ಯೋಜನೆ ನಿನಗೆ ತಿಳಿಸಿದೆ. ನಿನ್ನ ವಿಚಾರ ಒಗ್ಗಿದರೆ ನನ್ನ ಕಡೆಗೆ ನೋಡು. ...ಇಲ್ಲವಾದರೆ....”

“ಬಾಬೂ ಶಕ್ಯವಿಲ್ಲ.”

“ವಿಮಲಾ ಹಿಂದೆ ನಾನು ಹಳ್ಳಿಗೆ ಹೊರಟು ನಿಂತಾಗ ನಿನ್ನ ಪ್ರೇಮ ಉಕ್ಕಿ ಬಂದಿತು. ಈಗ ಅದು ಅರಗಿತೇ?”

---

—ಚಾಸಿಂಗಬಲ

" ಅರಗಿಲ್ಲ ಕೊರಗುತ್ತಲಿದೆ "

" ವಿಮಲಾ ಪ್ರೇಮಕ್ಕೆ ಮುಂಗಾಲ್ಪುಟಿಗೆ ಅಸತ್ಯ. ಅದಕ್ಕೆ ವಿವೇಕ ಅಮೃತ. "

" ಮೊದಲ ದಿಟ್ಟಿಯು ಪ್ರೇಮ. "

" ಮೊದಲ ದಿಟ್ಟಿಯಲ್ಲಿ ಭವಿತವ್ಯದ ರೂಪ ಕಾಣುವಂತೆ ದಿಟ್ಟಿ ಶಿಕ್ಷಣಪಡೆದಿದ್ದರೆ ಅದಕ್ಕೆ ಹಾನಿಯಿಲ್ಲ. ವಿವೇಕಹೀನ ತಾರುಣ್ಯದಫಲ ಅವಿವೇಕದ ಪ್ರೇಮ. ದಿಟ್ಟಿಗೆ ಕಾಣುವದು ಮೊದಲು ಕಣ್ಣಿನ ಹೊಳಪು. ಕಣ್ಣಿನ ತೇಜದಲ್ಲಿ ಮುಖದ ಚೆಲುವು, ಬುದ್ಧಿಯವಿಕಾಸ ಅಡಗಿದೆ. ನಿಸ್ತೇಜ ಕಣ್ಣುಗಳು ಯಾವ ಚಂದ್ರಮುಖಿಯನ್ನು ಹೊಗಳಲಾರವು. ಕಣ್ಣಿನಿಂದ ಉಂಡ ಅಮೃತ ಮುಖದಲ್ಲಿ ಪಸರುವದು. ಅದೇ ಸಹಾನು ಭೂತಿ. ಆ ದೇಹಕ್ಕೆ, ಆ ಹೆಸರಿಗೆ, ಆ ಮನೆತನಕ್ಕೆ ಕೊನೆಗೆ ಆ ದೇಶಕ್ಕೆ ಆಡರುವದು. ಇದು ಪ್ರೇಮಝುರಿಯ ಪ್ರವಾಹರೇಷೆ. ಎಲ್ಲರೂ ತುಳಿದ ದಾರಿಯದು. ಆದರೆ ದಾರಿ ಸುಗಮವಾಗುವದು ಒಂದು ಯೋಗ. ವಿವೇಕದ ಅಗಲ್ಕೆಗೆ ನಾವು ಕಾಮುವೆನ್ನುವದು. ಕಾಮದ ಬಲೆಗೆ ಬೀಳ ದಿರಲು ತಾರುಣ್ಯಕ್ಕೆ ವಿವೇಕದ ಜೋಡು ಬೇಕು. ನಮ್ಮ ಭವಿತವ್ಯ ನೋಡು. ನಮ್ಮ ಚಿರಂತನ ಮದುವೆಯ ಸಮಾರಂಭ ನೆನೆ. ಎರಡೂ ಹೊಂದಿಕೆಯಾಗುವಂತಿದ್ದರೆ ಮಾತಿನ ನೆಲೆ ಹರಿಯಲಿ. "

" ಇದೇನು ಅನುಭವಾಮೃತವೋ ಕಾವ್ಯ ಪ್ರತಿಭೆಯೋ....? "

" ಯಾವುದೂ ಸರಿ. ನನಗೆ ಅನ್ನಿಸುವದು, ಇದು ನಮ್ಮ ಪ್ರೇಮದ ಮೊದಲನೆಯ ಪಾಠ. ಇಬ್ಬರಿಗೂ ಒಂದು ವ್ಯಕ್ತಿತ್ವವಿದ್ದಾಗ ಒಂದರಲ್ಲಿ ಇನ್ನೊಂದು ಅರಗಿದರೇ ಒಂದಾಗುವದು. ತ್ರಿವೇಣೀ ಸಂಗಮದಲ್ಲಿ ನೀರು ಕೂಡಿ ಹರಿಯುತ್ತಿಲ್ಲ. "

" ನೌಕರಿ ಕೆಲಸ ಹೀನಾಯವೇ ? "

" ಇಂಗ್ಲೀಷರನ್ನು ಇಲ್ಲಿಂದ ಹೊರ ಹೊರಡಿಸುವಾಗ ನೌಕರಿಯನ್ನು ನಾಕಷ್ಟು ಟೀಕಿಸಿದ್ದಾಗಿದೆ. ಆಗ ಕಳಕೊಂಡ ಮಾನವನ್ನು ಈಗ ನೌಕರಿಯು

ಮತ್ತೆ ಗಳಿಸಬೇಕಾಗಿದೆ. ಸದ್ಯ ನೌಕರಿಯ ಬಗ್ಗೆ ಪ್ರಚಾರ ಮಾಡಬೇಕಾಗಿದೆ. ಒಂದು ನಂಬಿಗಸ್ತ ಕುದುರೆಯು ಒಂದು ಯುದ್ಧವನ್ನು ಗೆಲ್ಲುವದು. ”

“ ವ್ಯಕ್ತಿತ್ವವನ್ನು ಅರಗಿಸಬೇಕೋ ? ಕರಗಿಸಬೇಕೋ ? ”

“ ಒಂದು ವ್ಯಕ್ತಿತ್ವವನ್ನು ಇನ್ನೊಂದು ಅರಗಿಸುವದು ಶಿಕ್ಷಣದ ದಾರಿ ಒಂದು ಇನ್ನೊಂದನ್ನು ಕರಗಿಸುವದು ದೈವೀ ಶಕ್ತಿ. ವ್ಯಕ್ತಿತ್ವವನ್ನು ಕರಗಿಸುವ ಕರ್ತೃತ್ವ ಶಕ್ತಿ ಋಷಿಗಳ ದಿವ್ಯವಾಣಿ ನಮ್ಮಲ್ಲಿಲ್ಲ. ”

“ ಏನಿದ್ದರೂ ಪ್ರೇಮದ ನಮ್ಮ ಮೊದಲ ಪಾಠ ತುಸು ಕಹಿಯಾಗಿಯೇ ಸಾಗಿತು. ”

“ ಸತ್ಯವನ್ನು ಮೊದಲು ಯಾರೂ ತೆರೆಗೈಗಳಿಂದ ತಬ್ಬಿಕೊಂಡಿಲ್ಲ. ನನ್ನ ಕಡೆಗೆ ಬೆನ್ನು ಮಾಡಿದ ನಿನ್ನ ದೃಷ್ಟಿಗೆ ನಾನು ಹೇಗೆ ಕಾಣಬೇಕು ?”

“ ಇಷ್ಟು ದಿನ ಕಂಡದ್ದೇನು ? ”

“ ಕಂಡದ್ದೇನೋ ಕಾಣಬಲ್ಲ ದೃಷ್ಟಿಗೆ ಕಾಣುವದು. ನೀನು ಇಷ್ಟೇ ಕಂಡಿದ್ದರೆ ನೀನು ಏನೂ ಕಂಡಿಲ್ಲವೆಂದೇ ಹೇಳಬಹುದು. ”

“ ಕವಿಗೆ ನೆಲದ ಆಧಾರ ಕಡಿಮೆ. ”

“ ಹಾರಾಡುವ ಕವಿಗೆ ಆಧಾರ ಅನವಶ್ಯಕ. ಅವನ ದಿಟ್ಟಿ ಮಾತ್ರ ನೆಲದಲ್ಲಿಯೇ ನೆಟ್ಟಿದೆ. ನೆಲದಲ್ಲಿ ನೆಟ್ಟ ದಿಟ್ಟಿಯುವನಿಗೆ ನೆಲದ ಆಧಾರ ಯಾಕೆ ಬೇಕು ? ”

“ ಇಲ್ಲಿಗೆ ಪ್ರಾರ್ಥನೆಯಾಯಿತು. ಇನ್ನು ಪಂಚಾಂಗಶ್ರವಣ, ಅಮೃತ ವಾಣಿಯನ್ನು ಹೇಳಬೇಕೇನು ? ”

“ ವಿಮಲಾ ನೀನು ಸಿಟ್ಟಿಗೆದ್ದೀಯೆ..... ನನ್ನ ಮನಸ್ಸಿನಲ್ಲಿ ಇದ್ದುದನ್ನು ಬಿಡಿಸಿ ಇಟ್ಟಿದ್ದೇನೆ. ”

“ ಛೀ. ನನಗೆಲ್ಲಿಯ ಸಿಟ್ಟು. ನನಗೆ ಸರ್ವಾನಂದವಾಗಿದೆ. ”

“ ನಿನ್ನ ಮುಂದಿನ ಗೊತ್ತು ಗುರಿಗಳು ನನಗೆ ತಿಳಿಯಬಹುದೇನು ?”

“ ಬೆಳೆದ ದೇಹದಲ್ಲಿ ಸಾಕಷ್ಟು ಭಾಷಾ ಚೈತನ್ಯವಿದೆ. ಒರೆದುದನ್ನು ನಾವು ತೋರಿಸಿದ ಕೈಗಳಿಗೆ ಕೊಡುವ ದಯಾಳು ಹೃದಯಿಗಳಿದ್ದಾರೆ. ಇನ್ನು ಉಳಿದುದು ಅಂತರಂಗದರ್ಶನ, ಅದಕ್ಕೆ ಹೇಳಬೇಕಲ್ಲವೇ ? ”

—ಬಾಸಿಂಗಬಲ

" ಆಗಲಿ ನಿನ್ನ ಇಷ್ಟವಿದ್ದಾಗ ಬರೆದು ತಿಳಿಸು. ಇನ್ನು ಹೋಗ ಬಹುದಲ್ಲ. "

" ಅವಶ್ಯವಾಗಿ. ವ್ಯಾಪಾರ ಬಗೆಹರಿದ ಮೇಲೆ ಸರಕುಗಳನ್ನು ಅಂಗಡಿಗೆ ಸಾಗಿಸುವದೆಷ್ಟೊತ್ತು ? "

ಬಾಬೂ ವಿಮಲೆಯು ಕಡೆಗೆ ನೋಡಿದನು. ವಿಹ್ವಲವಾದ ಕಣ್ಣುಗಳು ಕಿಡಿಗಳನ್ನು ಕಾರುತ್ತಿದ್ದವೋ ಅಥವಾ ಕ್ರಂದನದ ದಾರಿ ಹಿಡಿದಿದ್ದವೋ ಅವನಿಗೆ ತಿಳಿಯಲಿಲ್ಲ. ತಾನು ಕೊಟ್ಟ ಮುದ್ದು ತುಸು ಜಾಲೀಮು ಮಾತ್ರ ಇತ್ತೆಂದು ಅದರ ಪರಿಣಾಮದಿಂದ ಅವನು ಕಂಡುಕೊಂಡನು. ಅದೂ ಒಂದೇ ಸಲಕ್ಕೆ ಸೇವಿಸಿದುದರಿಂದ ಚಿಕ್ಕಕರುಳುಗಳ ಬಿಂಗಬಿಡಿಸಿದ್ದವು ಇನ್ನು ಮುಟ್ಟಿದರೆ ಕರಳು ಕತ್ತರಿಸಬಹುದೆಂದು ಅವನು ಶಾಂತನಾಗಿದ್ದನು ಮನಸ್ಸು ತೆರವಾದುದರಿಂದ ಅದು ನಡುಗೆಯ ಮೇಲೆ ಕೇಂದ್ರವಾಯಿತು ಪಿಂಡರಿಕೆಗಳಿಗೆ ಬಿದ್ದ ಬಾರಕೋಲ ಹೊಡೆತ ಕಾಲುಗಳನ್ನು ತ್ವರಿತವಾಗಿ ಓಡಿಸುತ್ತಿದ್ದವು. ಆದರೆ ವಿಮಲೆಯ ಅದೃಷ್ಟದ ನಡುಗೆಗೆ ಬಾಬೂನ ಮುಗದಾಣ ಅವಶ್ಯವಾಯಿತು ಒಂದೊಂದು ಸಲ ಅವಳನ್ನು ಹಿಂದೆ ಹಾಕಿ ಮುಂಬರಿಯಲಾ ಎಂಬ ಆಶೆ ಬಲವಾದರೂ ಕೂಡಿ ಬಂದದ್ದು ಕೂಡಿಯೇ ಹೋಗುವದು ವಿಹಿತವಾಗಿತ್ತು. ಹಾಗೂ ಹೀಗೂ ನಡೆದು ಮಹಾದೇವನ ಕತ್ತರಿಗೆ ಬಂದಾಗ ವಿಮಲೆಯ ವ್ಯಗ್ರ ಮನಸ್ಸೂ ತುಸು ಹಾಯಾಗಿತ್ತು.

" ಮನೆಗೆ ಬರುವದಿಲ್ಲವೇ ? " ಅವಳು ಒಣಗಿದ ತುಟಿಗಳಿಂದ ಕೇಳಿದಳು

" ಇನ್ನೊಮ್ಮೆ ಬರುತ್ತೇನೆ.... ಈಗೊಂದು ನಮಸ್ಕಾರ. " ಎಂದು ಬಾಬೂ ನುಡಿದು ಬರಬರ ನಡೆದು ಹನುಮನ ಕತ್ತರಿಗೆ ಕಾಣದಾದನು. ವಿಮಲೆ ಒಂದು ಕ್ಷಣ ಹೊತ್ತು ನಿಂತು ಅವನು ಮರೆಯಾದ ಮೇಲೆ ಒಂದು ನಿಟ್ಟುಸಿರು ಬಿಟ್ಟು ಮಹಾದೇವನ ಬೀದಿಯಲ್ಲಿ ಹೊರಳಿದಳು.

" ಪ್ರತಿ ನಮಸ್ಕಾರ ನಾನು ಕೊಡಲಿಲ್ಲ.... ಮರೆತೆ. " ಅವಳು ತನ್ನಷ್ಟಕ್ಕೆ ತಾನೇ ಅಂದು ಕೊಂಡಳು.

---

## ೧೦ ಸಂದೇಶ.

* * *

ತಂಗಿಯ ಮತ್ತು ಅಣ್ಣನ ಮದುವೆ ಮುಗಿಸಿದ ಬಾಬೂ ಹೊಲದಿಂದ ಮನೆಗೆ ತಿರುಗುವ ಎತ್ತುಗಳಂತೆ ಸಂತೋಷ ಪುಲಕಿತನಾದನು. ಇನ್ನು ತನ್ನ ಮನದ ಬಯಕೆ ಕೈಗೂಡಿತೆಂದು ಬಗೆದನು. ವಿಯೋಗದ ಚುರುಕು ಹದನ. ತಂಗಿ ಅಣ್ಣರು ಒಂಟಿಗರಾಗಿದ್ದಾಗ ಅವರ ಕಡೆಯ ಎಳೆತ ತಿಳಿಯು ದಿದ್ದುದು ಅವರು ಜೋಡುಕೊಂಡಾಗ ಸ್ಪಷ್ಟವಾಯಿತು. ಅವರೆಷ್ಟು ಅನೀತಿ ವಂತರೆಂದು ತೆಗಳಿ ದೂರನಿಂತರೂ ಜಗವು ಅವರನ್ನೇ ಎತ್ತಿ ಮೇಲಕ್ಕೇ ರಿಸಿತು. ಇದೇನು ಯೋಗಾಯೋಗವೋ? ಬಾಸಿಂಗಬಲವೋ? ಜಗತ್ತಿನ ವೈಚಿತ್ರ್ಯವೋ? ಅವನಿಗೆ ತಿಳಿಯಲಿಲ್ಲ. ಹುಡುಗನಾಗಿದ್ದಾಗ ಅವರನ್ನು ಅವನು ಬೈದನು. ತಾರುಣ್ಯದ ಅವರ ಬಾಳು ಬೀಳುಗಳೆದನು. ಗೃಹಸ್ಥಾಶ್ರ ಮದಲ್ಲಿ ಅವರ ಸುಖಕ್ಕೆ ಅಸೂಯೆಬಟ್ಟನು. ಈಗ ತಾಯಿಯೇ ಅವನಿಗೆ ಪರಮಮಿತ್ರಳು. ಬಾಬೂನ ಈ ಅಂತಃಚಂಚಲತೆಯುಅವನ ಬಹಿರಂಗದ ಮ್ಲಾನವದನ, ನೆಟ್ಟ ದಿಟ್ಟಿ, ಥಟ್ಟನೆ ಹೊರಟ ಬಿಸಿಯುಸುರುಗಳಿಂದ ತಿಳಿಯದಿರುತ್ತಿರಲಿಲ್ಲ. ಆದರೆ ವಿಮಲೆಯ ಕರುಣಕಥೆ ಅವಳ ಕಿವಿ ಮುಟ್ಟಿ ದಾಗ ಅವಳ ಬಾಯಿಗೆ ಬೀಗ ಬಿದ್ದಿದ್ದಿತು. ಅವಳ ಸ್ವಭಾವ, ಅಂತಃಚಿಂತನೆ, ಮೂಕಸಹನೆ ದುಡುಕದಿರುವದು. ಆದುದರಿಂದ ವಿಷಯವು ಬದುಕಿ ನಂತೆ ಮುಂಬರಲಿ ಎಂಬುದೇ ಅವಳ ಬಯಕೆ. ಆದರೆ ಅದೂ ಸಾಧ್ಯವಾಗ ಲಿಲ್ಲ. ಬದುಕು ಕೂಡ ತಿಳಿದಾಗೊಮ್ಮೆ ತಿಳಿಯದಿದ್ದಾಗೊಮ್ಮೆ ಹೂಬಿಡುವ ಹಳೆಯ ಮಾಮರದಂತೆ ವಿಚಿತ್ರ ವ್ಯಾಪಾರಗಳ ಸಂತೆಯಾಗಿತ್ತು. ಪ್ರಶ್ನದ ಉತ್ತರ ಹೊಳೆದ ಚಂಚಲಬಾಲಕನಂತೆ ಒಂದು ದಿನ ಅವಳು ಥಟ್ಟನೆ ಉಸಿರಿ ದಳು.

“ಬಾಬೂ ನಿನ್ನ ಸುಖ ನೋಡಿ ನನ್ನ ಕಣ್ಣು ಮುಚ್ಚಬೇಕು.” ಎಂದು.

“ಸುಖವೋ? ದುಃಖವೋ?” ಬಾಬೂನ ಸವಾಲು.

“ಚತುರ್ಭುಜಸುಖ.”

—ಬಾಸಿಂಗಬಲ

" ಅಮ್ಮಾ, ನಿನಗೆ ಸುಖವಾಗುವದು ನನ್ನ ಮದುವೆಯಿಂದೋ ಮರಿ ಮಗನಿಂದೋ ? "

" ಮರಿಮಗನು ನನ್ನ ಬಾಯಿದೆರೆದು ಉಳಿದ ಹಲ್ಲುಗಳನ್ನು ಎಣಿಸುವದನ್ನು ನೋಡಿ ಸಂತೋಷಬಟ್ಟಾಗ ಅದು ಸ್ವರ್ಗಸುಖ. ಆದರೆ ಅಷ್ಟು ದೂರದ ಆಶೆ ನಾನು ಇಟ್ಟುಕೊಂಡಿಲ್ಲ. ಹಂದರದ ಮೇಲೆ ಹಂದರವಾದರೆ ಸಾಕು. "

" ಬಾಳೇಹಣ್ಣು ರೋಚಕವೆಂಬುದೇನೋ ನಿಜ. ಆದರೆ ಬೇನೆ ಬಿದ್ದಾಗ ಅದನ್ನು ಯಾರೂ ಕೊಡುವದಿಲ್ಲ. "

" ಬಾಬೂ ! "

" ಅಹುದು ಅವ್ವಾ. ನನ್ನ ಹಿಂದಿನ ದಿನಗಳನ್ನು ಈಗ ನೆನೆದು ನನಗೆ ಅಳುವು ಬರುತ್ತದೆ. ಕಮಲೆ, ಧೀರರ ಬಗ್ಗೆ ನನಗೀಗ ಅಸೂಯೆಯಾಗುತ್ತಿದೆ. ಅದೇ ನಿನ್ನ ಮಾತುಗಳು ... "

" ಬಾಬೂ ಕಣ್ಣು ಸಂಸ್ಕಾರ ಎಂಬುದೊಂದು ಇದೆ. ನಿನ್ನ ದಿವ್ಯ ದರ್ಶನವನ್ನು ನಾನು ಮಲಿನಮಾಡಲಾರೆ. "

" ದರ್ಶನ ದಿವ್ಯವೂ ಇದೆ, ಭವ್ಯವೂ ಇದೆ. ಆದರೆ ಅದರ ಸ್ಥಿರತೆಗೆ ಬಲವಿಲ್ಲದಾಗಿದೆ. "

" ಬಾಬೂ ! "

" ಅಹುದು ಅವ್ವಾ. ನಾನು ಕೇವಲ ಮದುವೆಗಾಗಿ ಹಾತೊರೆಯುತ್ತಿಲ್ಲ. ಜೊತೆಗಾರಳಿಗಾಗಿ ಕಾದಿದ್ದೇನೆ. "

" ಆರುವರುಷ ದಾರೀ ಕಾದವಳನ್ನು ಬಿಟ್ಟು.... "

" ರಕ್ತವೇ ವಿಭಿನ್ನವಾಗಿದೆ. "

" ಗೋಡೆ ಯಾವುದಿದ್ದರೇನು ? ಗಿಲಾಯಿಗೇಕೆ ಇಷ್ಟು ವಿವೇಚನೆ. "

" ಗೋಡೆಯ ತುಂಬ ಸ್ಫೋಟಕಗಳು, ಕಿಡಿಗೊಂದು ಜ್ವಾಲೆ. "

" ನಾನು ಕೇಳಿದ್ದೇನೆ. ನೀನು ತಿಳಿದಷ್ಟು ಪರಿಸ್ಥಿತಿ ಗಂಭೀರವಾಗಿಲ್ಲ. "

" ಹೆಳ್ಳಿಗೆ ಒಪ್ಪಿದಳೇ. "

"ಮೊದಲು ಪಟ್ಟಣಕ್ಕೆ ಬರುತ್ತಾಳಂತೆ."

"ಅದೇ .....ಅಲ್ಲಿಗೆ ನಿಂತಿದೆ."

"ಹಳ್ಳಿ ಪಟ್ಟಣಗಳಲ್ಲಿ ಭೇದಭಾವವೇಕೆ ?"

"ವಾಸ್ತವವಾಗಿ ಅವು ಬೇರೆ ಬೇರೆ."

"ಇದಕ್ಕೆ ಉಪಾಯವೇ ಇಲ್ಲವೇ ?"

"ಇದೆ."

"ಏನು ?"

"ತಮ್ಮ ದಾರಿ ತಾವು ಕೊರೆಯುವದು."

ಬಾಬೂನ ಈ ಮಾತು ಗೋದಾವರಿಯ ಮನಸ್ಸಿಗೆ ಹಿಡಿಯಲಿಲ್ಲ. ಬಾಬೂ ಕೂಡ ಒಣದಾಗಿ ನಕ್ಕನು. ಮಾತಿನಲ್ಲಿ ಗೆದ್ದೆನೆಂದಲ್ಲ. ಆದರೆ ಅದೇಕೋ ಒಂದು ತೀವ್ರ ಸಂವೇದನೆ ಅವನನ್ನು ತಿವಿಯುತ್ತಿದ್ದಿತು. ಇದ್ದ ಪರಿಸ್ಥಿತಿಯನ್ನು ತನಗೆ ಅನುಕೂಲಿಸಿ ಜೀವನವನ್ನು ಸುಗಮ ಮಾಡುವ ಒಂದು ಜೀವವನ್ನು ಅವನು ಕಂಡಿದ್ದ. ಪ್ರತಿಕೂಲ ಪರಿಸ್ಥಿತಿ ಬಂದಾಗ ಅದರೊಡನೆ ಅಸಹಕರಿಸುವ ಒಂದು ಜೀವವನ್ನು ಅವನು ಕಂಡಿದ್ದ. ಈಗ ಅವನ್ನೇ ದರ್ಶನದ ತೋಲದಲ್ಲಿ ತೂಗಿ ನೋಡುತ್ತಿದ್ದನು. ತೂಕದಲ್ಲಿಯ ಜಡತ್ವಕ್ಕಿಂತಲೂ ವಿಭಿನ್ನತೆಯ ಕೃಶತೆಯನ್ನೇ ಅವಲೋಕಿಸುತ್ತಿದ್ದನು. ಮನಸ್ಸು ಶತಪಥ ಹಾಕುತ್ತಿತ್ತು. ವಿವೇಕವು ಜಾಗೃತಿ ಹೊಂದಿದರೂ ತಾಳಲಾರದ ಭಾರದಿಂದ ಕುಸಿದು ಕುಗ್ಗುತ್ತಿತ್ತು. ಹೋಗಲೋ ಬೇಡವೋ ಎನ್ನುವ ಗಾಡಿಯಂತೆ ಚಂಚಲತೆ ಹೊಯ್ದಾಡುತ್ತಿತ್ತು. ಸ್ಫೋಟಕವು ಉದ್ದೀಪ್ತಗೊಂಡಾಗ ಸಿಡಿಯುವ ಕಿಡಿಗಳಂತೆ ದಾರಿದಾರಿಗೂ ಮನಸ್ಸು ದಿಕ್ಕು ತಪ್ಪುತ್ತಿತ್ತು. ದೇಹ ಬಳಲಿದಾಗ ನಿದ್ದೆ ನಿಶ್ಚಿಂತೆ. ಮನಸ್ಸು ಬಳಲಿದಾಗ ವಿರಾಮ, ಚಕ್ಕಂದದ ನುಡಿ, ಕಲಾಕಾರನ ಕೈವಾಡ ಬಿದ್ದ ಗಿಡಕ್ಕೂ ಚೇತನ ಕೊಡಬಲ್ಲದು. ಇದಕ್ಕೆ ಬಾಹಿರವಾದ ಒಂಟಿತನವು ಏಕಾಂತತೆಯನ್ನೋ !

ತಲೆಯು ಕಾಯ್ದು ಕೆಂಡವಾಗಿತ್ತು. ಸಂತಸದ ಬಿರುಗಾಳಿ ಬೀಸದಿದ್ದರೆ ಬಿರುಕುಬಿಟ್ಟು ಬಿರಿಯುವ ಸಂಭವವಿತ್ತು. ತಾಳಲಾರದ ವೇದನೆಗೆ

ಆನುಗೋಲಿಕ್ಕಲು ಬಾಬೂ ಕೈಯನ್ನು ಹಣೆಗೆ ನೇವರಿಸಿದನು. ಕಣ್ಣು ಗಳು ಸ್ಫೋಟವಾದಂತಾದವು. ಯಾವುದೋ ಗಭೀರನಿನದವು ಅವನ ಕಿವಿ ಗಳನ್ನು ಗಡಚಿಕ್ಕಿದವು. ಕಣ್ಣು ತೆರೆದರೂ ಕಾಣದ ತನ್ಮಯತೆಯಲ್ಲಿ ಅವನು ಬಹಳ ಹೊತ್ತು ಇರಲಿಲ್ಲ

" ಬಾಬೂ " ತಾಯಿ ಎಂದಳು.

ಬಾಬೂ ಮೌನವಾಗಿದ್ದನು.

ಗೋದಾವರಿಯು ಎದ್ದು ಬಾಗಿಲದ ಬಳಿ ಬಂದಳು. ಅದೇ ಪೋಷ್ಟ ಮನ್ನನು ಒಗೆದು ಹೋದ ಒಂದು ಪತ್ರವನ್ನು ಕೈಯಲ್ಲಿ ತೆಗೆದುಕೊಂಡು " ಬಾಬೂ " ಎಂದಳು.

ಬಾಬೂ ಮೌನಸಮಾಧಿಯಲ್ಲಿದ್ದನು.

ಎರಡು ಸಲ ಕರೆದರೂ ಓ ಕೊಡದ ಈ ಮೌನದ ಬಗ್ಗೆ ಅವಳಿಗೆ ಆಚ್ಚರಿಯಾಯಿತು. ಅವಳು ಪತ್ರವನ್ನು ಅಡಕಿಲು ಟ್ರಂಕುಗಳ ಮೇಲೆ ಇಟ್ಟು ಬಾಬೂನ ಹತ್ತಿರ ಬಂದಳು. ಮೈಮುಟ್ಟಿ ನೋಡಿದಳು. ಮೈಯು ಕೆಂಡವಾಗಿತ್ತು.

" ಬಾಬೂ " ಎಂದಳು.

ರಕ್ತಗೂಡಿದ ಕಣ್ಣುಗಳಿಂದ ನಿರ್ಬಲನಾದ ಬಾಬೂ ಓ ಕೊಡಲಿಲ್ಲ. ದೀನವದನದಿಂದ ತಾಯಿಯನ್ನು ನೋಡಿದನು ಮಾತ್ರ.

" ಮೈತುಂಬ ಜ್ವರವಿದೆ. ಸುಮ್ಮನೆ ಕುಳಿತಿರುವೆ. ಹೇಳಬಾರದೇ? " ಎಂದು ಹಾಸಿಗೆಯನ್ನು ಹಾಸಿದಳು. ಬಾಬೂ ಎದ್ದು ಹಾಸಿಗೆಯ ಮೇಲೆ ಮಲಗಿದನು. ಗೋದಾವರಿಯು ಒಳಗೆ ಹೋಗಿ ಒಂದು ಕಪ್ಪು ಬಿಸಿ ಬಿಸಿ ಕಾಫಿ ಮಾಡಿತಂದಳು. ಬಾಬೂ ಅದನ್ನು ಕುಡಿದು ಮುಸುಕುಹಾಕಿ ಮಲ ಗಿದನು.

ಸಂಜೆಗೆ ಡಾ|| ಪರಮಾಜರು ಬಂದು ಪರೀಕ್ಷಿಸಿದರು. ವಿಶೇಷ ಭಯ ವೇನೂ ಇರಲಿಲ್ಲ. ಅತ್ಯಾಯಾಸದಿಂದ ಬಂದ ದುರ್ಬಲತೆಯ ಸಮಯ ವನ್ನು ಜ್ವರ ಸಾಧಿಸಿತ್ತು. ಹೆಚ್ಚು ವಿರಾಮ ಅವಶ್ಯಕವೆಂದು ಒತ್ತಿ ಹೇಳಿ ದರು.

" ಇನ್ನು ನೀವು ನಿಮ್ಮ ಬಾಯಿಗೆ ತುಸು ರಜೆ ಕೊಡಬೇಕು. " ಡಾ॥ ಪರಮಾಜರು ನಗೆಯಾಡಿದರು.

" ಬಾಯಿ ಮುಚ್ಚಿದರೆ ಸರಿ " ಬಾಬೂ ಅಂದನು.

" ಛೀ ಇದೇನು ವಿಚಾರ ಬಾಬೂರಾವ. " ಡಾ॥ ಪರಮಾಜರೆಂದರು. " ನಿಮ್ಮಿಂದ ಬಹಳ ಕೆಲಸವನ್ನು ನಾವು ಅಪೇಕ್ಷಿಸುತ್ತೇವೆ. ಈಗಲೇ ಬಾಯಿಮುಚ್ಚಿದರೆ ಹೇಗೆ. ನೀವು ಭಯಪಡಬೇಡಿ. ವಿರಾಮ ತೆಗೆದು ಕೊಂಡರೆ ನೀವು ನಾಲ್ಕು ದಿನಗಳಲ್ಲಿ ಎದ್ದು ಕೂಡುತ್ತೀರಿ. "

" ಆಗಲಿ. " ಬಾಬೂ ಎಂದನು.

ಡಾಕ್ಟರರ ಸಲಹೆಯಂತೆ ಬಾಬೂ ಆರಾಮ ಪಡೆದರೂ ಅವನು ಆರೋಗ್ಯವಂತನಾಗಬೇಕಾದರೆ ಹದಿನೈದು ದಿನಗಳು ಬೇಕಾದವು.

ಅವನಿಗೆ ಆರಾಮವೆನಿಸಿದಾಗ ತಿರುಗಾಡಿ ಬರುವಾ ಎಂದು ಹೊರಟನು. ದಾರಿಯುದ್ದಕ್ಕೂ ಅವನಿಗೆ ವಿಶೇಷ ಶ್ರಮವಾಗಲಿಲ್ಲ. ಆದರೆ ತನ್ನ ತೋಟ, ತನ್ನ ಕೆಲಸ, ತನ್ನ ಸುತ್ತು ಮುತ್ತಲಿನ ಜನ ಇವರ ಬಗ್ಗೆ ಅವನಿಗೆ ಮತ್ತೆ ಮತ್ತೆ ನೆನಪಾಗಿ ನೆನಹಿನ ಸಂತಸವನ್ನು ತಂದುಕೊಡುತ್ತಿದ್ದವು. ಈ ನಾಲ್ಕು ತಿಂಗಳು ಅವಧಿಯಲ್ಲಿ ಗೋಸಬಾಳದಲ್ಲಿ ಯಾವ ಯಾವ ಸ್ಥಿತ್ಯಂತರಗಳಾಗಿವೆಯೋ ಅವನಿಗೆ ತಿಳಿದು ಬಂದಿರಲಿಲ್ಲ. ಒಂದು ಮೂರು ತಿಂಗಳ ಅವಧಿಯಲ್ಲಿ ತಿರುಗಬೇಕೆನ್ನುವವನು ಆರು ತಿಂಗಳಾದರೂ ಇನ್ನೂ ಇಲ್ಲಿಯೇ ಇದ್ದನು.

ನಡುವೆ ಈ ಅನಾರೋಗ್ಯ ಅವನನ್ನು ತಡೆಯದಿದ್ದರೆ ಅವನು ಊರಿಗೆ ಹೋಗಿ ಎರಡು ವಾರಗಳು ಮಿಕ್ಕುತ್ತಿದ್ದವು. ಅವನು ಮೋಟಾರ ನಿಲ್ದಾಣವನ್ನು ದಾಟಿ ಕೋಟೆಯ ಕಂದಕದ ಕೆರೆಗೆ ಬಂದನು. ಮಳೆಗಾಲದಲ್ಲಿ ಕೋಡಿ ಹಾಯುತ್ತಿದ್ದ ಕೆರೆ ಈಗ ಮುಕ್ಕಳಿಸೇನೆಂದರೆ ಒಂದು ಹನಿ ನೀರು ಇರಲಿಲ್ಲ ಇದ್ದು ಬಿದ್ದ ರಾಡಿ ನೀರನ್ನು ಎಮ್ಮೆಗಳ ಸುಪ್ಪೊತ್ತಿಗೆಯಾಗಿ ಪರಿಣಮಿಸಿತ್ತು. ಹಣೆಗೆ ನಿಂತ ಬೆವರ ಮುತ್ತುಗಳನ್ನು ಒರಿಸಲು ಕೈ ವಸ್ತ್ರವನ್ನು ಬಾಬೂ ತೆಗೆದನು. ವಸ್ತ್ರದ ಜೊತೆಗೆ ಒಂದು ಪತ್ರ ಹೊರಗೆ

ಬಿದ್ದಿತು. ಹಳೆಯ ಪತ್ರವಿರಬಹುದೆಂದು ಅವನು ತಿರುವಿ ನೋಡಿದನು. ಆದರೆ ಪತ್ರದ ಯಾವ ಬದಿಯೂ ಹರಿದಿರಲಿಲ್ಲ. ಅವನಿಗೆ ಇನ್ನಿಷ್ಟು ಕುತೂಹಲವಾಯಿತು. ಪತ್ರದ ತಾರೀಖಿನ ಕಡೆಗೆ ನೋಡಿದನು. ಅದು ಅದೇ ತಿಂಗಳು ಅದೇ ವರುಷದ್ದಿದ್ದಿತು. ಅಚ್ಚು ಮಾತ್ರ ಹಳಯದಾಗಿ ಹದಿನೈದು ದಿನದ ಹಿಂದಿನ ತಾರೀಖನ್ನು ತೋರಿಸುತ್ತಿತ್ತು.

ತನ್ನ ಅನಾರೋಗ್ಯ, ಈ ಓಲೆ ಬಂದ ದಿನ ಒಂದೇ ಆಗಿರಬಹುದೇ ? ಅವನ ನೆನಹಿನ ಶಕ್ತಿ ಹಿಂದಿನ ಆ ದಿನಕ್ಕೆ ಓಡಿತು. ಆಗ್ಗೆ ತಾನು ತಲೆಹಿಡಿದುಕೊಂಡು ಕುಳಿತುದು, ಟಪಾಲ ಸೀಪಾಯಿಯ ಸಪ್ಪಳವಾದುದು, ಬಾಬೂರಾವ ಎಂದು ಒದರಿ ಒಂದು ಪತ್ರ ಚೆಲ್ಲಿದುದು, ಅದನ್ನು ತಾಯಿ ಎತ್ತಿಕೊಂಡು ಎಲ್ಲಿಯೋ ಇಟ್ಟುದು, ಅವನ ಮೈ ಕಾಯುದ್ದನ್ನು ನೋಡಿ ಹಾಸಿಗೆ ಹಾಸಿಕೊಟ್ಟದು, ಕಾಫಿ ಮಾಡಿಕೊಟ್ಟದು, ಇತ್ಯಾದಿ ಘಟನೆಗಳು ಒಂದೊಂದೇ ಅವನ ಕಣ್ಣೆದುರಿಗೆ ಹಾಯ್ದುಹೋದವು. ಆದರೆ ಪತ್ರ ತನ್ನದಿದ್ದಾಗ ತಾಯಿಯು ಇಷ್ಟು ದಿನ ಅದನ್ನು ತನಗೇಕೆ ಕೊಡಲಿಲ್ಲ ?

ಅವನಿಗೆ ಅರ್ಥವಾಗಲಿಲ್ಲ. ತಾನು ತೊಟ್ಟುಕೊಂಡ ಅಂಗಿಯನ್ನು ನೋಡಿದನು. ಆ ಅಂಗಿಯು ಹದಿನೈದು ದಿನದ ಹಿಂದೆ ತೊಟ್ಟ ಅಂಗಿಯೇ ಆಗಿತ್ತು. ತಾಯಿ ಆಗ ಬಂದ ಪತ್ರವನ್ನು ಎತ್ತಿ ಆ ಜೇಬಿನಲ್ಲಿ ಹಾಕಿರಬಹುದೇ ?

ಪತ್ರವನ್ನು ಒಡೆದು ಓದಿದನು.

ಲೋಕಾಪುರ.

ಸಂಕಟದಲ್ಲಿದ್ದೇನೆ. ಒಮ್ಮೆ ಊರಿಗೆ ಬಂದರೆ ಬದುಕಬೇಕೆಂಬ ಆಶೆಯಿದೆ

—ನಿಮ್ಮ ಯಾಯಾ.

ಯಾಯಾ ಎಂದ ಕೂಡಲೇ ಅವನ ಜೀವ ಹಗುರಾಯಿತು— ಯಾಯಾ ಸಂಕಟದಲ್ಲಿರುವಳೇ ?

ಯಾನ ಸಂಕಟ ? ನನ್ನ ಬರುವಿಕೆಗೆ ಹಾರೈಸುತ್ತಿರುವಳೇ?...ಇಲ್ಲವಾದರೆ....ಸಾವು. ಅಹುದು. ಓಲೆ ಬಂದು ಹದಿನೈದು ದಿನವಾಯಿತು. ಈ ಹದಿನೈದುದಿನದ ಅವಧಿಯಲ್ಲಿ ಅವಳು ಜೀವದಿಂದಿರಲು ಸಾಧ್ಯವೇ ?

ಬಾಬೂ ತನ್ನ ಅನಾರೋಗ್ಯವನ್ನು ಶಪಿಸಿದನು. ತನ್ನ ಅನಾರೋಗ್ಯವು ಒಂದು ಜೀವದ ಹತ್ಯೆಗೆ ಕಾರಣವಾಯಿತೆಂದು ತಿಳಿದನು. ಆ ಓಲೆ ಎರಡುವಾರಗಳ ಹಿಂದೆ ತನಗೆ ಸಿಕ್ಕಿದ್ದರೂ ತನ್ನನ್ನು ಒತ್ತಾಯದಿಂದ ಇಟ್ಟುಕೊಳ್ಳಲಾಗುತ್ತಿತ್ತೆಂದೂ ಅವನು ತಿಳಿದನು.

ಈಗ ಊರಿಗೆ ಹೋಗಲೋ ಬೇಡವೋ ಎಂಬುದು ಸಮಸ್ಯೆಯಾಗಿರಲಿಲ್ಲ. ಯಾಯಾ ಜೀವದಿಂದ ಇರುವಳೋ ಇಲ್ಲವೋ ಇದೇ ಸಮಸ್ಯೆ. ಅಂಥದೇನಾದರೂ ಸಂಭವಿಸಿದ್ದರೆ ಈ ಓಲೆ ಕಳಿಸಿದಂತೆ ಇನ್ನೂ ಒಂದು ಓಲೆ ಬರಬಹುದಾಗಿತ್ತು ಎಂದು ಅವನು ತರ್ಕಿಸಿದನು.

ಬಾಬೂ ನಿರಾಶೆಯಿಂದ ಮನೆಯಕಡೆಗೆ ನಡೆದನು. ಮನೆಯಲ್ಲಿ ಒಂದು ತಾರು ಕಾದು ನಿಂತಿತ್ತು. ಅದನ್ನು ಅವನು ಒಡೆದು ಓದಿದನು.

"ಈ ದಿನ ಕೊನೆಯದು."

— ಯಾಯಾ.

ಬಾಬೂನಿಗೆ ಆಶೆಯುದ್ಭವಿಸಿತು. ಅವನು ಅವಶ್ಯಕವಾದ ತನ್ನ ಅರಿವೆಗಳನ್ನು ಜೋಡಿಸಿದನು. ಅವನ್ನು ಒಂದು ಕೈಚೀಲದಲ್ಲಿ ತುರುಕಿದನು. ಹೊರಡಲನುವಾದನು.

"ಅವ್ವಾ ನಾನು ಈಗ ಹೋಗಬೇಕು!" ಬಾಬೂ ಗಾಬರಿಗೂಡಿದ ಧ್ವನಿಯಲ್ಲಿ ಅಂದನು

"ಗೋಸಬಾಳಕ್ಕೆ?" ತಾಯಿ ಕೇಳಿದಳು.

"ಇಲ್ಲ. ಲೋಕಾಪುರಕ್ಕೆ."

"ಇಲ್ಲಿ ಬಂದು ಗೋಸಬಾಳಕ್ಕೆ ಹೋಗುವಿಯಾ?"

"ನೋಡಬೇಕು."

"ತುಸು ಫಲಾಹಾರ ತಿಂದು ಹೋದರೆ ಒಳಿತಲ್ಲವೇನು?"

— ಬಾಸಿಂಗಬಲ

" ಗಾಡಿಗೆ ಈಗ ವೇಳೆಯಾಗಿದೆಯಲ್ಲ! "

" ಹಾಗಾದರೆ ಕಟ್ಟಿಕೊಡಲಾ ? "

" ಹೂಂ. ಕಟ್ಟಿಕೊಟ್ಟುಬಿಡು. "

ಗೋದಾವರಿ ಅವನಿಗೆ ಎರಡು ಒಪ್ಪತ್ತು ಸಾಲುವಷ್ಟು ಫಲಾಹಾರವನ್ನು ಕಟ್ಟಿಕೊಟ್ಟಳು. ಅದನ್ನು ಅವನು ಚೀಲದಲ್ಲಿ ಹಾಕಿ, ನಮಸ್ಕಾರ ಮಾಡಿ ಹೊರಟನು.

ಮೋಟಾರ ನಿಲ್ದಾಣಕ್ಕೆ ಬಂದಾಗ ಬಾಗಿಲಕೋಟೆಯ ಗಾಡಿಯು ಆದೇ ಹೋಗಿತ್ತು. ಎರಡನೆಯ ಗಾಡಿಯು ಹೊರಡಲು ಇನ್ನೂ ಎರಡು ತಾಸು ಅವಧಿಯಿತ್ತು. ಅವನು ಈ ಎರಡು ತಾಸುಗಳನ್ನು ಕಳೆಯುವದೇ ಕಠಿಣವಾಯಿತು.

ಮೋಟಾರದ ಏಜಂಟನು ನೇಸರಗಿ, ಯರಗಟ್ಟಿ, ಲೋಕಾಪುರ, ಬಾಗಲಕೋಟೆ ಎಂದು ಒದರುತ್ತಿದ್ದನು. ಬಾಬೂನಿಗೆ ಅವನ ಈ ಚೀರುವಿಕೆ ಕಠೋರವಾಗಿ ಕೇಳಿಸಿತು. ಊರಿಗೆ ಹೋಗುವವರು ಹತ್ತಿರ ಬಂದು ತಿಕೀಟುಕೊಳ್ಳುವರು. ಈ ಪರಿ ಒದರಿದರೆ ಊರಿಗೆ ಹೋಗದವರು ಊರಿಗೆ ಹೋಗುವರೇ? ಎಂದು ಅನ್ನಿಸಿತು. ಸಮೀಪದಲ್ಲಿ ಉಂಡಾಡಿಗರು ಹರಟೆಹೊಡೆಯುತ್ತಿದ್ದರು. ದಿನದ ಈ ವೇಳೆಯನ್ನು ಉದ್ಯೋಗದಲ್ಲಿ ಕಳೆಯುವದನ್ನು ಬಿಟ್ಟು ಮಾತುಗಾರಿಕೆಯ ಮಬ್ಬಿನಲ್ಲಿ ವ್ಯರ್ಥವೇ ಕಿಗಳೆಯುತ್ತಿರುದವನ್ನು ನೋಡಿ ಅವನ ಮನಸ್ಸಿಗೆ ವ್ಯಥೆಯಾಯಿತು.

" ಯಪ್ಪಾ ಒಂದು ದುಡ್ಡರಿ. " ಒಬ್ಬ ತಿರುಕ ಕೈಯೊಡ್ಡಿದನು.

ಬಾಬೂ ನೋಡಿದನು. ಸಶಕ್ತ, ಸದೃಢ, ದೃಢಕಾಯದ ಪುರಷನು ಮಾನದ ಬಾಯಿಗೆ ಕೈಯೊಡ್ಡುತ್ತಿದ್ದನು.

" ಯಾರಪಾ ನೀನು? " ಬಾಬೂ ಕೇಳಿದನು.

" ತಿರುಕರಿ....ಬಿಕ್ಕೆ ಬೇಡವ. "

" ಬಿಕ್ಕೆ ಏಕೆ ಬೇಡುವಿ? "

" ಹೊಟ್ಟೀ. ಹೊಟ್ಟೆ ಒಂದು ಐತೆಲ್ಲಾ? "

" ದುಡಿಯಲ್ಲಾ. ನಿನಗೇನು ಸಶಕ್ತನಾಗಿದ್ದೀ "

" ಏನ ದುಡೀಬೇಕರಿ. ನೌಕರಿ ಸಿಗವಲ್ಲದು. "

" ಕೂಲಿ ಮಾಡು, ಟಾಂಗಾಹೊಡಿ, ಗಸ್ತೀತಿರುಗು, ಮನಸಿದ್ದರ ನಿನಗ ಕೈತುಂಬ ಕೆಲಸ. ಈ ಬಿಕ್ಕೆ ಯಾಕಬೇಕು? "

" ಊರ ತುಂಬ ದಿನಾ ತಿರಗಿದರ ಒಂದ ರೂಪಾಯಿ ಸಿಗತೈತಿ. ಯಾಕ ದುಡೀಬೇಕರಿ? "

" ಮಂದೀ ಬಕ್ಕರಿಗೆ ಬಾಯಿ ತಗೀಬಾರದು. "

" ಮಂದೀ ಬಕ್ಕರಿ ನಾ ಕೈಮುಟ್ಟಿ ಕಸಗೋದುಲ್ಲರಿ. ಅವರ ತಿಳಸು ಕೊಡತಾರು. "

" ಮೈಯಾಗ ಜಿಗುಟು ಇರೋತನಕ ದುಡಿ. ಈ ಆಶೆಬುರುಕ ತನ ಯಾಕ? "

" ನನಗ ಆಶೆಯುಲ್ಲರಿ ದಾನಾಕೊಡೋ ಜನದ ಯಮುಕರಿ ಅದು. ಯಪ್ಪಾ, ಚುಟ್ಟಾಸೇದಿ ಏಟಜನಾ ಹಾಳಮಾಡ್ಕೊದಿಲ್ಲ, ದಿನಾ ಇದ್ದಲಿ ದ್ವಾಸಿಗೆ ಏಟಜನಾ ಬೆಪ್ಪ ಆಗೋದಿಲ್ಲ. ನೂರು ರೂಪಾಯಿ ಸೂಟಕ್ಕ ಏಟ ಜನಾ ಬಲೀ ಬೀಳೋದಿಲ್ಲ. ಒಂದು ಲಾಖರೂಪಾಯಿ ಮನಿ ಏಟ ಜನಾ ಕಟ್ಟಿಸಿಲ್ಲ. ಇಂಥವರಿಗೆ ನಮ್ಮ ದರಕಾರ ಇಲ್ಲರಿ. ಒಂದಾಣೆ ಎಡ್ಡಾಣೆ ಒಗೀತಾರು ಸಾಕ......ಚಾದ ಅಂಗಡ್ಯಾಗ ಚಾ ಆಗತೈತಿ. ಖಾನಾವಳಿ ನಾಕ ರೊಟ್ಟಿಗೆ ಹೊಟ್ಟೀ ಚಿಂತಿ ಬಗೀ ಹರೀತೈತಿ. ಇನ್ನ ಬೀಡೀಸೇದವರ ಕೂಡ ಬೀಡಿ, ಎಲೀ ಅಡಿಕಿ, ತಂಬಾಕಮೆಲ್ಲವರಕೂಡ ಎಲಿ ಅಡಿಕೆ ತಂಬಾಕ ಆಗತೈತಿ. ಸಾಕಲ್ಲರಿ. ಇದರಕಿಂತ ಹೆಚ್ಚಿಗೆ ಯಾ ಬಂಟ ಗಳಿಸಿ ಉಂಡಾನು ಹೇಳರಿ. "

" ಅಲ್ಲಪಾ, ತಾಗಳಿಸಿ ಉಣ್ಣೋದು ಮಂದಿಗೆ ಬಾಯೊಡ್ಡಿ ಉಣ್ಣೋದು ಫರಕ ಅದನೋ ಇಲ್ಲೋ? "

" ಫರಕ ಐತಿ. ಇಲ್ಲ ಇದ್ದೀತ? ಆದರ ಫರಕ ಯಾರಿಗೆ. ? ಕಾಯ್ದೆ ಬಲ್ಲವರಿಗೆ ಐತಿ. ನಮಗೇನ್ರಿ. ಯಪ್ಪಾ......ಒಬ್ಬ ಕೂಲಿಮಾಡತಾನು. ಯಾಕರಿ? ತಾ ಕೊಂಡ ಸಾಮಾನ ಒಯ್ಯಲಾರದ್ದಕ್ಕ ಒಬ್ಬ ಜೋಪಾಪಿ

— ಬಾಸಿಂಗಬಲ

ಮನಿಮಟ ಹೊರಸಿಕೊಂಡು ಹೊಕ್ಯಾನು. ಕೂಲಿಯುವಗ ಕೂಲಿ ಸಿಗ ತೈತಿ....ಒಬ್ಬ ಒಕ್ಕಲಿಗ ದುಡೀತಾನು. ಒಬ್ಬ ಸೇಟಜಿ ಅಂಗಡೀ ಹಾಕ ತಾನು. ಹತ್ತೊರಸ ಇಬ್ಬರೂ ವಾಗತ್ತಲೆ ದುಡದರ ಒಕ್ಕಲಿಗ ಬಲೀಬಾರ್ಡ್ಡ ಆದರ ಎಂಟ ಎತ್ತಿನ ಕಮತಾ ನೀಗಿಸ್ಯಾನು ಆದರ ಸೇಟಜಿ ಒಂದು ಮನಿ ನಿಲ್ಲಿಸತಾನು. ಒಂದು ಚಾಳ ಕಟ್ಟಿಸತಾನು. ದುಡತ ಇಬ್ಬರದೂ ಅಟ ಇನ್ನೂ ಒಂದುತೂಕ ಒಕ್ಕಲಿಗನದ ಹೆಚ್ಚು. ಸಂಜೀಗೆ ದಮ್ಮಿನ ದಣೀತೈತಿ ಪಾಪ ಸೇಟಜಿ ಬಾಯಿಚಾಲಾಖಿತನದಿಂದ ದುಡ್ಡ ದುಡಿಯಾಕ ಹಚ್ಚಿ ಗುಡ್ಡಿಗೆದುಡ್ಡು ಕೂಡಿಹಾಕತಾನು ದುಡತ ಒಂದ ಇದ್ದು ಗಳಿಗೆ ಏರಫೇರ ಯಾಕ ಇರಬೇಕು? ಸಭಾದಾಗ ಎಡ್ಡ ಕುರ್ಚಿ ಇದ್ದ ಎಡ್ಡೊ ಇಂಥಾ ಗಣಪ್ಪಗ. ಒಕ್ಕಲಿಗನ ಕಂಬಳಿ ನೆಲಕ್ಕ ಗಂಟ. ”

“ ಜಗತ್ತಿನಾಗ ಅನ್ಯಾಯ ಅದ ಆದರ ಜಗತ್ತಿನಾಗ ಅನ್ಯಾಯ ಅದ ಅಂತ ನಮ್ಮ ಕಳ್ಳತನ ಒಪ್ಪ ಇಟ್ಟುಕೊಳ್ಳಲಿಕ್ಕೆ ಆದೀತೇನು? ”

“ ಯಪ್ಪಾ ನನ್ನ ಒಂದು ಹೊಟ್ಟಿಗೆ ಬೀಳಗಳಿಬ್ಯಾಡ್ರಿ. ಒಂದು ಹೊಟ್ಟಿ ಚಿಂತಿ ಇತ್ತಂದರ ನಮ್ಮ ದೇಶದಾಗ ಸಾಧೂಸಂತರನ್ನೊಂದ ಉಳೀತಿದ್ದಿಲ್ಲರಿ....ಯಪ್ಪಾ ಕೆಲಸಕೆಲಸ ಅಂತ ಬಾಳ ಚಾಲವರೀತೀರಿ. ಎಲ್ಲಿ ಆದರೂ ಕೆಲಸಾ ಕೊಡಸತೀರೇನು? ಹೇಳರಿ ಮತ್ತ ಅದೂ ಆಗಿ ಹೋಗಲಿ. ”

ಬಾಬೂ ತಿರುಕನ ಆವ್ಹಾನವನ್ನು ನಿನ್ನೆ ಸ್ವೀರಿಸಬಹುದಿತ್ತು. ಆದರೆ ಈಗ ಎದೆಯ ಮೇಲೆ ಜರೂರಿಯ ಕೆಲಸವಿಟ್ಟುಕೊಂಡು ಅವನಿಗೆ ಪಣತೊಡುವ ಸಾಹಸಮಾಡುವದಾಗಲಿಲ್ಲ. ಅಲ್ಲದೇ ಈ ವಾಚಾಳನು ಚನ್ನನ ಮರಿ ಏಕೆ ಇರಬಾರದು? ಪಾತ್ರನೋಡಿ ದಾನಮಾಡಬೇಕು? ಅವನು ಚರಿತ್ರವಂತನೋ ಚರಿತ್ರಹೀನನೋ ಅರಿತಿರಲಿಲ್ಲ. ಇಂಥ ಅಪ ರಿಚಿತನಿಗೆ ಕೆಲಸಕೊಟ್ಟು ತಾನು ಬೇಸರನಾಗುವದನ್ನೂ ಬಯಸಲಿಲ್ಲ.

“ ಇನ್ನೊಂದು ತಿಂಗಳಿಗೆ ನನ್ನ ಭೆಟ್ಟಿಯಾಗು. ”

“ ಎಲ್ಲೀ. ”

“ ಇಲ್ಲೀ. ”

" ತಿಂಗಳ ಮಾತು ಇಂದ ಯಾಕ ಆಡತೀರಿ. ಅಲ್ಲೀಮಟ ಏನ ಉಲಾಢೋಲಿ ಆಗತೈತೋ ರಾಮರಾಮ. "

ಬಾಬೂ ದೂರ ನೋಡುತ್ತಿದ್ದನು.

" ಊರಿಗೆ ಹೋಗಬೇಕೇನರಿ ಯಪ್ಪಾ. " ಅವನು ಕೇಳಿದನು.

" ಹೂಂ "

" ಯಾವೂರಿಗೇ. "

" ಲೋಕಾಪುರಕ್ಕ. "

" ಅಲ್ಲೆ ಕುಂತಾನನೋಡ್ರಿ ಇಮ್ರ್ಯಾ ತಿಕೀಟ ಕೊಡಾಕ ಹತ್ತೀದಾನು. ತಡಮಾಡಿದರ ತಿಕೀಟು ಸಿಗಲಾಕಿಲ್ಲಾ. "

ಬಾಬೂ ನೋಡಿದನು. ಏಜೆಂಟನು ತಿಕೀಟು ಕೊಡಲು ಆರಂಭ ಮಾಡಿದ್ದನು. ಬಾಬೂ ಅವನ ಸಮೀಪ ಹೋಗುವಷ್ಟರಲ್ಲಿ ಗಾಡಿಯೂ ಬಂದಿತು. ಬಾಬೂ ಗಾಡಿಯಲ್ಲಿ ಕುಳಿತು ಊರಿಗೆ ಹೊರಟನು.

---

## ೧೧. ಸದಿಚ್ಛಾಸಮಿತಿ. * * *

ಬಾಬೂ ಲೋಕಪುರ ಮುಟ್ಟಿದಾಗ ಸಂಜೆಯಾಗಿತ್ತು. ಅವನು ಬೆಳಗಾವಿಯನ್ನು ಬೇಗ ಬಿಟ್ಟರೂ ಇದ್ದಲಿ ಗಾಡಿ ಸುತಗಟ್ಟಿಯ ಏರು ಏರುವಾಗಲೇ ಹಟ ಹಿಡಿಯಿತು. ವಿಚಾರಾಂತದಲ್ಲಿ ಗ್ಯಾಸಿನ ಸಿಲಿಂಡರು ಗಳನ್ನು ಸ್ವಚ್ಛಮಾಡದಿದ್ದುದೇ ಕಾರಣವಾಗಿತ್ತೆಂದು ತಿಳಿದುಬಂತು. ಆದ್ದರಿಂದ ಎಲ್ಲಯಂತ್ರವನ್ನು ಬಿಚ್ಚಲೇಬೇಕಾಯಿತು. ಸಿಲೆಂಡರುಗಳನ್ನು ಹಸನ ಮಾಡುವದು ಕ್ಲೀನರನ ಕೆಲಸ. ಕ್ಲೀನರನು ಕೆಲಸ ಮಾಡಿದ್ದನೋ ಇಲ್ಲವೋ ಎಂದು ವಿಚಾರಿಸುವದು ಡ್ರಾಯವ್ಹರನ ಕೆಲಸ. ಒಬ್ಬರಿಗೊ

ಬ್ಬರು ಬೈದು ಬಾಯುತಿಂಡಿಯನ್ನು ತೀರಿಸಬೇಕಿತ್ತೆ ಹೊರತು ಪ್ರವಾಸಿಕರ ಗೋಳು ಕೇಳಿದಂತಾಗುತ್ತಿರಲಿಲ್ಲ. ಅವರು ಯಂತ್ರವನ್ನು ಬಿಚ್ಚಿ ಹಸನು ಮಾಡಿ ತಿರುಗಿ ಜೋಡಿಸಿ ತಿದಿ ಊದಿ, ನೀರುಸುರುವಿ ಅರ್ಧಗ್ಯಾಲನ್ ಪೆಟ್ರೋಲ ಸುರಿದಮೇಲೆ ಅದು ಏರಿ ದಾಟಿತು. ನಡುನಡುವೆ ತುಸು ಕಾಡಿದರೂ ಯರಗಟ್ಟಿಗೆ ಅದನ್ನು ಮತ್ತೆ ಸರಿಪಡಿಸಿದುದರಿಂದ ಮುಂದರಿದು ತೊಂದರೆಯಿಲ್ಲದೆ ಸಾಗಿತು. ಲೋಕಾಪುರವನ್ನು ಮುಟ್ಟಿದಾಗ ಮಬ್ಬುಗತ್ತಲಾಗಿತ್ತು.

ಅಪರಿಚಿತ ಊರಿನಲ್ಲಿ ಅವನಿಗೆ ಎಲ್ಲಿ ಇಳಿಯಬೇಕೆಂಬುದು ತಿಳಿಯಲಿಲ್ಲ. ಮೋಟಾರನಿಲ್ದಾಣದಲ್ಲಿ ಇಳಿದು ಅಲ್ಲಿಯೇ ಇರುವ ಚಹಾದ ಅಂಗಡಿಯಲ್ಲಿ ಕಾಫಿಮಾಡಲು ಹೇಳಿದನು. ಕಾಫಿ ಸಿದ್ಧವಾಗುವ ವರೆಗೆ ಗಂಟು ಬಿಚ್ಚಿ ತಾಯಿ ಕಟ್ಟಿದ ಫಲಾಹಾರ ತೆಗೆದನು. ಅವನಿಗೆ ಹರಿದುಹಸಿವೆಯಾಗಿತ್ತು. ಎರಡು ಹೊತ್ತಿಗೆ ಹಾಕಿದ ಫಲಾಹಾರವನ್ನು ಒಂದೇಸಲ ತೀರಿಸಿದನು. ತಾಯಿಯ ಮುಂಧೋರಣೆ ಮಮತೆಯ ಕರುಳು ಎಲ್ಲವೂ ಅವನಿಗೆ ಇಂದು ಮಧುರವಾಗಿ ಜ್ಞಾಪಕವಾದವು. ಅವಳು ಫಲಾಹಾರ ಕೊಡದಿದ್ದರೆ ಇಂದು ರಕರಕಿಸುವ ಅಂಗಡಿಯ ಆಹಾರಕ್ಕೆ ಬಾಯಿ ಬಿಡಬೇಕಾಗುತ್ತಿತ್ತು. ಅವನ ಫಲಾಹಾರ ತೀರುವ ಹೊತ್ತಿಗೆ ಅಂಗಡಿಕಾರ ಕಾಫಿ ತಂದು ಇಟ್ಟನು. ಗ್ಲಾಸಿನಲ್ಲಿಯ ಕಾಫಿಗೆ ಘಮಘಮ ಸುವಾಸ ಇಡುಗಿತ್ತು. ಉಗಿ ಬೆಳ್ಳಗೆ ಆಡುತ್ತಿತ್ತು. ಅವನ ಗ್ಲಾಸು ಎತ್ತಿ ಮೇಲಿನ ಪರದೆ ಊದಿ ಕಾಫಿ ಕುಡಿವನು. ನಾಲಿಗೆಗೆ ಚುರುಕು ಹತ್ತಿತು. ಕಾಫಿಯ ರುಚಿಯಂತೂ ತಿಳಿಯಲಿಲ್ಲ. ಅದನ್ನು ಊದಿಊದಿ ಆರಿಸಿದನು. ಒಂದೊಂದೇ ಗುಟುಕು ಕುಡಿದನು. ಕುಡಿದಂತೆ ಓಕರಿಕೆ ಬರಹತ್ತಿತು. ಬಾಳಂತಿಯ ಕಾಢೆಯಂತಿರುವ ಆ ಕಾಫಿಯನ್ನು ಅತ್ತ ಬಿಸುಟು ನೀರು ತರಿಸಿದನು. ನೀರು ಕುಡಿದಮೇಲೆ ಹೊಟ್ಟೆ ಶಾಂತವಾಯಿತು ಅವನು ಗಂಟು ಹೊತ್ತು ಊರಕಡೆಗೆ ನಡೆದನು.

ಹೊಟ್ಟೆಯಂತೂ ಶಾಂತವಾಗಿತ್ತು. ಇನ್ನು ಬೇಕಾದುದು ವಿಶ್ರಾಂತಿ, ನಿದ್ದೆ, ವಿರಾಮ. ಅವನು ಗಂಟು ಹೊತ್ತುಕೊಂಡು ಸಾಲೆಯ ಕಡೆಗೆ ನಡೆ

ದನು. ಶಾಲೆ ದೂರ ಇರಲಿಲ್ಲ. ಅದನ್ನು ಮುಟ್ಟಲಿಕ್ಕೆ ನಾಲ್ಕಾರು ಹಜ್ಜ ಇರುವಾಗಲೇ ಸಹಜವಾಗಿ ಹಿಂತಿರುಗಿ ನೋಡಿದನು. ಯಾರೋ ತನ್ನನ್ನು ಹಿಂಬಾಲಿಸುತ್ತಿರುವಂತೆ ಕಂಡಿತು. ಅವನು ವಿಶೇಷ ಚಿಕಿತ್ಸೆಮಾಡದೆ ಆವ್ಹಾರದ ಗೋಡೆ ದಾಟಿ ಕಟ್ಟಡದ ಮೆಟ್ಟಲುಗಳನ್ನೇರಿದನು. ನೆಲವನ್ನು ತನ ಜಮಖಾನೆಯಿಂದ ಜಾಡಿಸಿ ತಲೆದಿಂಬಿಗೆ ಚೀಲವನ್ನು ಇಟ್ಟು ಹಾಯಾಗಿ ಒರಗಿದನು. ಒರಗಿ ಒಂದೆರಡು ನಿಮಿಷಗಳು ಸಂದಿರಲಿಕ್ಕಿಲ್ಲ. ಮೆಟ್ಟಲುಗಳ ಮೇಲೆ ಕಾಲುಸಪ್ಪಳವಾಯಿತು. ಕಲ್ಲುಗಳಿಗೆ ಅರಿವೆ ತಾಗಿದ ಸಪ್ಪಳವಾಯಿತು. ನಿರುಗೆಗಳನ್ನು ಫದಫದ ಒದೆದಂತಾಯಿತು. ಕತ್ತೆತ್ತಿ ನೋಡಲು ಬೆನ್ನಟ್ಟಿ ಸಂಶಯ ಬಂದ ಹೆಂಗಸೇ ಸಾಲೆಯಕಟ್ಟೆ ಏರಿ ಬಂದಳು ಬಾಬೂ ಎದ್ದು ಕುಳಿತನು.

" ಯಾರು? " ಎಂದು ಕೇಳಿದನು.

ಬಂದವಳು ಒಮ್ಮೆಲೇ ಉತ್ತರ ಕೊಡಲಿಲ್ಲ. ಹತ್ತಿರ ಬಂದಳು. ಮೋರೆಯನ್ನು ನಿರುಕಿಸಿದಳು. ಅರಿವೆಯನ್ನು ಪರೀಕ್ಷಿಸಿದಳು.

" ಧಣೀರೇನ್ರಿ? " ಎಂದಳು.

" ನೀನು ಯಾರು? "

" ಯಾಯಾ ಕಳ್ಸಿದಳು. "

" ಯಾಯಾ !" ಬಾಬೂ ಚಕಿತನಾಗಿ ಕೇಳಿದನು.

" ಎಲ್ಲಿ ಇದ್ದಾಳ? ಏನ ಮಾಡಲಿಕ್ಕೆ ಹತ್ತಿಯಾಳ? ನನ್ನ ಅವಳ ಕಡೆಗೆ ಕರೆದುಕೊಂಡು ಹೋಗಲಿಕ್ಕೆ ಬಂದೀಯಾ? " ಬಾಬೂ ಅಂದನು.

" ಅವಳ ಮನಿ ಈಗೊಂದು ಕ್ವಾಟಿ. ಒಂದ ಪಿಳ್ಳಿ ಒಳಗ ಹೋಗಾಣಿಲ್ಲಾ.... ಅವಳ್ನ ಇಲ್ಲೇ ಕರತರಲೇನ್ರಿ? "

" ಇಲ್ಲೇ ?"

" ಅವಳ್ನ ನಿಮಗ ನೋಡಬೇಕಾಗೇದೇನ್ರಿ? "

" ಅಹುದು. ಈಗ ಸದ್ಯ. "

" ಹಾಂಗಾರ ನನ್ನ ಕೂಡ ಬರ್ರಿ.

—ಬಾಸಿಂಗಬಲ

ಬಾಬೂ ಗಂಟು ಗದಡಿ ಕಟ್ಟಿಕೊಂಡು ಅವಳನ್ನು ಬೆನ್ನಟ್ಟಿದನು.

ಆಕಾಶದಲ್ಲಿ ಮೇಘಗಳು ಮಿಲಿತವಾಗುತ್ತಿದ್ದವು. ಈ ಸೇನಾಸಂಕಲನ ಸಮ್ಮಿಲಿತವಾಗುವದನ್ನು ಒಂಟಿಗನಾದ ಚಂದ್ರನು ಯಾವ ರೀತಿಯಿಂದಲೂ ತಡೆಯಲು ಶಕ್ಯನಾಗಲಿಲ್ಲ. ತಿರುಗಿ ತಾನೂ ತಲೆ ಮರೆಯಿಸಿಕೊಂಡು ಹೋಗುವ ಸಿದ್ಧತೆಯಲ್ಲಿದ್ದನು. ಇಡೀ ದಿನ ಶಾಖವಾಗಿ ಜನವೆಲ್ಲವೂ ಉಬ್ಬಸ ಬಡುತ್ತಿತ್ತು. ಈ ಮೇಘಮಾಲೆ ಬಾನು ತುಂಬಿ ಹಾರಿಹೋಗುವ ಕಾವನ್ನೂ ನಿಲ್ಲಿಸಿತು. ಜನರನ್ನೆಲ್ಲ ಕಾವಿನ ಕುಂಡದಲ್ಲಿ ಕೂದಿಸಿದಂತಾಗಿ ಅವರು ಕಳವಳ ಬಡುತ್ತಿದ್ದರು ಊದು ಕೊಳವೆಯಿಂದ ಊದಿದ ಗಾಳಿಗೂ ಬೇಸರವಾದ ಹವೆಯು ಘನೀಭೂತವಾದಂತೆ ಸ್ತಬ್ಧವಾಗಿತ್ತು. ದಿನವೂ ಈ ಉಬ್ಬಸ, ಶಾಖ ಮೋಡಗಳಿಗೆ ಜನ ಬೇಸತ್ತಿತ್ತು. ಇಂದಿಲ್ಲ ನಾಳೆ ಮುಂಗಾರು ಬೀಳಲಿರುವದೆಂದು ಅವರ ತರ್ಕ. ತರ್ಕವು ಕೊನೆಗೆ ಬೇಸರದಲ್ಲಿಯೂ ಶಾಪದಲ್ಲಿಯೂ ಪಡಿಮೂಡುತ್ತಿತ್ತು. ಮಳೆಯಾಗುವದಂತೂ ನಿಶ್ಚಿತವಾಗಿತ್ತು. ಆದರೆ ಅದು ಕೂಡ ಸ್ಥಳ ಮತ್ತು ಮುಹೂರ್ತವನ್ನು ಕಾಯುತ್ತಿತ್ತೇನೋ !

ಬಾಬೂ ಅವಳ ಬೆನ್ನು ಹತ್ತಿ ಸೇತುವೆಯನ್ನು ದಾಟಿ ಪಾಟಿಯ ಕಾರಖಾನೆಯನ್ನು ಬಲಕ್ಕೆ ಉಳಿದು ಎಡಕ್ಕೆ ಕಾಡಿನಲ್ಲಿ ಹೊರಳಿದನು. ಅಲ್ಲಲ್ಲಿ ಕಲ್ಲಿನ ಕಣಿಗಳು ಬಾಯಿದೆರೆದು ಭಯಾನಕವಾಗಿದ್ದವು. ಸುತ್ತಲೆಲ್ಲವು ಹರಹಿದ ಕಲ್ಲಿನ ತುಣುಕುಗಳು ಮೆಟ್ಟಿದ ಕಾಲ್ಮರಿಗೆಗಳ ತೂಕ ತಪ್ಪಿಸುತ್ತಿದ್ದವು. ಇಬ್ಬರೂ ಮೆಲ್ಲನೆ ನಡೆದು ಊರ ಹಿಮ್ಮಗ್ಗಲಿನ ಬದಿಗೆ ಬಂದರು. ಅವಳು ಒಂದು ಆಳವಾದ ಕಲ್ಲಿನ ಕಣಿಯಲ್ಲಿ ಇಳಿಯ ಹತ್ತಿದಳು.

" ಎಲ್ಲಿಗೆ ? " ಬಾಬೂ ಕೇಳಿದನು.

" ನೀವು ಈ ಕಣಿಯಾಗ ಇರ್ರಿ. ನಾನು ಅವಳ್ನ ಕರಕೊಂಡು ತರತೇನಿ " ಎಂದವಳೇ ಅವಳು ಉತ್ತರದ ದಾರಿಯನ್ನು ಕಾಯದೇ ಹೊರಟು ಹೋದಳು.

ಬಾಬೂ ಸುತ್ತಲೆಲ್ಲವೂ ನಿರೀಕ್ಷಿಸಿದನು. ಯೋಜನೆಯಿಲ್ಲದೆ ಕಡಿದ ಆ ಕಣಿಯು ವಿವಿಧಾಕಾರಗಳನ್ನು ಒಳಗೊಂಡಿತ್ತು. ಸದ್ಯಕ್ಕೆ ಅದನ್ನು ಉದ್ದವಾದ ಕಂಭಗಳನ್ನು ಕೊರೆಯಲು ಬಿಟ್ಟಂತಿತ್ತು. ಕಾಲಬದಿಯಿಂದಲೇ

ಹೊರಟ ಒಂದು ಕಂಭ ಇನ್ನೂ ಅಪೂರ್ಣವಾಗಿ ಕೆಳಬದಿಗೆ ಕಲ್ಲ ಬಂಡೆಗೆ ಅಂಟಿಕೊಂಡಿತ್ತು. ಕೇವಲ ಕಲ್ಲಾಗಿದ್ದ ಅದನ್ನು ಯಾವ ಛಾಣವು ಕಲೆಯ ನೆಲೆವನೆ ಮಾಡಲಿತ್ತೋ ಅವನಿಗೆ ತಿಳಿಯಲಿಲ್ಲ. ಕುಣಿಯ ಒಂದು ಬದಿಗೆ ತುಣುಕು ಕಲ್ಲುಗಳ ರಾಶಿಯೇ ಬಿದ್ದಿತ್ತು. ಅಲ್ಲಲ್ಲಿಗೆ ಕಲ್ಲಿನ ಕಟ್ಟೆಗಳನ್ನು ಕಟ್ಟಿ ಸುಣ್ಣ ಚಿಮುಕಿಸಿದ್ದರು.

ಬಾಬೂ ಆ ಕಂಬದ ಒಂದು ಬದಿಯಿಂದ ಸಾವಕಾಶವಾಗಿ ಇಳಿದನು. ಕಂಬ ಮುಗಿದ ಬದಿಗೆ ಕುಳಿತನು. ಕುಣಿಯ ಕತ್ತಲೆಯು ಗವಿಯಂತಾಗಿತ್ತು. ಮೇಲೆ ಕತ್ತೆತ್ತಿ ನೋಡಿದನು. ಕಲ್ಲಿನ ಉಬ್ಬುಗಳು ಸಾಗಿ ಬಂದು ಬೀಳಲೋ ಎನ್ನುವಂತೆ ಭಯಪಡಿಸುತ್ತಿದ್ದವು. ಕೊರೆದ ಏಣುಗಳು ಅಲಗುಗಳಂತೆ ಹದನವಾಗಿದ್ದವು.

ನಾಯಿಯೊಂದು ಬಗುಳಿತು. ಆಕಾಶದಲ್ಲಿ ಮೋಡಗಳು ಗುಡುಗುಡಿಸ ಹತ್ತಿದವು.

ಬಾಬೂನಿಗೆ ತನ್ನ ಪರಿಸ್ಥಿತಿಯೇ ವಿಚಿತ್ರವಾಗಿ ಕಂಡಿತು. ಯಾರಾದರೂ ಅವನನ್ನು ಆ ಸ್ಥಿತಿಯಲ್ಲಿ ಕಂಡಿದ್ದರೆ ಕಪ್ಪರ ಗುಂಪಿನ ನಾಯಕನೆಂದು ತಿಳಿಯಬಹುದಿತ್ತು.

ಯಾಯಾನ ಸಂಕಟವೇನು ಇತ್ತು ಇನ್ನೂ ಅವನಿಗೆ ಗೂಢವಾಗಿಯೇ ಇತ್ತು. ಅರ್ಧ ತಾಸು ಮಿಕ್ಕಿದರೂ ಯಾರ ಸುಳಿವೂ ಹತ್ತಲಿಲ್ಲ. ತಾನು ಯಾವಳನ್ನೋ ನಂಬಿ ಯಾರ ಬಲೆಯಲ್ಲಿ ಸಿಕ್ಕೆನೋ ಎಂದು ತಳಮಳಿಸಿದನು. ಪ್ರಯತ್ನಬಟ್ಟರೆ ಇನ್ನೂ ಜಾರಿ ಹೋಗಬಹುದಿತ್ತು. ಅದು ಯಾಯಾನ ವೈರಿಗಳು ಹರಡಿದ ಬಲೆ ಏಕೆ ಆಗಿರಬಾರದು ?

ವೈರಿಯ ವಿಚಾರ ಬಂದ ಕೂಡಲೇ ಬಾಬೂ ಕಣಿಯಲ್ಲಿಯೇ ನಡುಗಿದನು. ಗೋಸಬಾಳವು ತನ್ನ ಕ್ಷೇತ್ರ. ಇದು ಲೋಕಾಪುರದ ಗೌಡನ ಬೈಲು ಭೂಮಿ. ಏರಿ ಹೋದ ಬಂಟನಿಗೆ ಸಂಕಟಗಳು ಹೆಚ್ಚು. ಜಂಬಲಿಗರ ಬಲವಿಲ್ಲದೆ ಮುನ್ನುಗ್ಗಿ ಮುಖಭಂಗಪಡಿಸಿಕೊಳ್ಳಬೇಕೇಕೆ ?

ಅವನು ಗಂಟು ಗದಡಿಗಳನ್ನು ಎತ್ತಿ ಹೆಗಲಿಗೇರಿಸಿದನು. ಮೆಲ್ಲನೆ ಇಳಿದ ದಾರಿಯನ್ನು ಏರಹತ್ತಿದನು. ಅವನು ಕುಣಿಯ ಮೇಲ್ಮೈ ಹತ್ತಿದಾಗ

ಚಂದ್ರನ ಮೋರೆ ಓರೆಯಾಯಿತು. ಆಗ ಅದೇ ಕಣಿಯ ಬಾಯಿಗೆ ಬಂದ ಯಾಯಾನ ಅದ್ಭುತರೂಪ ನೋಡಿ ಬಾಬೂ ಬೆರಗಾದನು.

ಮುಖದ ಏಣುಗಳಿಗೆಲ್ಲವೂ ರಕ್ತವು ಚಿಮ್ಮಿ ಚಿಮ್ಮಿ ಕೆಂಗೊಂಡಿತ್ತು. ಉಟ್ಟ ಹಸಿರು ಸೀರೆ ಚಂದ್ರನ ಕಿರಣಗಳಿಗೆ ಥಕಥಕಿಸಿ ರೇಶಿಮೆಯ ಜರದ ಬೆಲೆಯನ್ನು ಸಾರ್ಥಕಗೊಳಿಸುತ್ತಿದ್ದಿತು. ಬೆರಗು, ಸಂತಸ, ಬೆದರು, ಸದಾಸೆ ಮತ್ತು ಆತುರತೆಗಳಿಂದ ಕೂಡಿದ ಆ ದುಂಡು ಮೊಗಕ್ಕೆ ಬೆಳುದಿಂಗಳಿನ ಕಾಂತಿ ಒಮ್ಮೆ ಮೂಡಿ ಮರೆಯಾಯಿತು. ನಾಲ್ಕೂ ಕಣ್ಣುಗಳು ಕೂಡಿದಾಗ ಆಡಿದ ಮಾತುಗಳು ಬೆನ್ನಬಿದ್ದಾಕೆಗೆ ಅರ್ಥವಾಗದಿರಲಿಲ್ಲ. ಅವಳು ಮೆಲ್ಲನೆ ಹಿಂದೆ ಸರಿದಳು.

"ಧಣೇರ ಕೊನೆಗೂ ಬಂದಿರಾ." ಎಂದು ಯಾಯಾ ಬಾಬೂನ ಕಾಲಿಗೆರಗಿದಳು.

"ಗೋಸಬಾಳಪ್ಪನ ಕಾಲು ಬಿದ್ದಿದ್ದರೆ ನಿನ್ನ ಮನಸ್ಸಿನ ಮಂಡಿಗೆಯನ್ನಾದರೂ ಕೂಡಿ ಹಾಕುತ್ತಿದ್ದ." ಬಾಬೂ ನಗೆಯಾಡಿದನು.

"ಆಯಾ ದೇವರಿಗೆ ಆಯಾ ವರ ಬೇಡತಾರು. ಸರಸೋತಿಗೆ ಬುದ್ಧಿ ಕೊಡಂತ, ಹನಮಪ್ಪಗ ಬಲಕೊಡಂತ, ಗಣಪ್ಪಗ ಇದ್ಯಾ ಕೊಡಂತ ಬೇಡತಾರು."

"ಹಂ. ಸಂಕಟ ಬಂದಾಗ ವೆಂಕಟರಮಣ."

"ನಿಮ್ಮ ತೋಟಾ ಗಾಳೀ ಪಾಲು ಆಗತಿತ್ತು. ಆಗ ನನಗ ಗಾಗರಿ ಕಿದ್ದಿರಲ್ಲ. ಆಗ ಹ್ಯಾಂಗ."

"ನೆರವಾದ ಮ್ಯಾಲ ಮರಗಬಾರದ್ದು."

"ನನ್ನ ಮರಗು ಕೇಳೋವರ್‍ಯಾರು? ಪ್ರಸಂಗ ಬಂತೂ ಅಂತ ಆಡಿ ತೋರಿಸಬೇಕಾತು."

"ಆದಿರಲಿ. ನಾ ಈಗ ಏನ ಮಾಡಲಿ?"

"ನಿಮಗ ಎಲ್ಲಾ ತಿಳದೈತಿ?"

"ಏನು!"

"ಹಾಂಗಾರ ನನಗ ಬೇಕಾಗಿರೋದು ನಿಮಗ ಹ್ಯಾಗ ಗೊತ್ತು."

" ಅದನ್ನ ಹೇಳು ಅಂದೆ.....ನಾ ಏನು ಮಾಡಬೇಕು. ನನ್ನ ತಾರ ಕೊಟ್ಟ ಯಾಕ ಕರಿಸಿದಿ ? "

ಬಾಬೂನ ಈ ವ್ಯವಹಾರಿಕ ಪ್ರಶ್ನೆಯಿಂದ ಅವಳಿಗೆ ನಿರುತ್ಸಾಹವಾಯಿತು. ಎಷ್ಟು ಏರಿದ ಹುರುಪಿನಿಂದ ಅವಳು ಬಂದಿದ್ದಳೋ ಅಷ್ಟೇ ಜರ್ರನೆ ಇಳಿದು ಹೋದಳು. ತಾನು ಬಂದ ಉದ್ದೇಶವನ್ನು ಅವನಿಗೆ ಹೇಳಲೊ ಬೇಡವೋ ಎನ್ನಿಸಿತು.

ಅವಳು ಮೆಲ್ಲನೆ ಎದ್ದಳು.

" ಹಾಗಾದರ ನಾ ಹೋಗತೀನಿ ? " ಎಂದು ಅಂದಳು.

" ಹೋಗು. " ಬಾಬೂ ಅಂದನು.

ಯಾಯಾ ಎದ್ದಳು. ಬಾಬೂನ ಕಡೆಗೆ ಬೆನ್ನು ತಿರುಹಿದಳು ಕಣ್ಣಲ್ಲಿ ನೀರು ತುಂಬಿದ್ದವು. ದುಃಖವು ಬಿಕ್ಕಿ ಹೊರಗೆ ಬರಲು ಯತ್ನಿಸುತ್ತಿತ್ತು.

ಯಾಯಾ ಎದ್ದಳೇನೋ ನಿಜ. ಕಾಲು ಕೀಳಲಿಲ್ಲ. ಬಾಬು ನಿಲ್ಲು ಎಂದೂ ಅನ್ನಲಿಲ್ಲ. ಯಾಯಾನ ದುಃಖ ಒತ್ತರಿಸಿ ಬಂದಿತು. ಅವಳು ಬಿಕ್ಕಿ ಬಿಕ್ಕಿ ಅಳಹತ್ತಿದಳು.

" ಯಾಯಾ ಕೂಡು. ಬಂದ ಕಾರಣ ಹೇಳಿ ಹೋಗು. " ಬಾಬೂ ಮೆಲ್ಲನೆ ಅಂದನು.

" ಕೇಳುವವರಿಗೇ ದರಕಾರ ಇಲ್ಲದ್ರ ಯಾರಿಗೆ ಹೇಳಲಿ ? " ಯಾಯಾ ತಿರುಗಿ ಅಂದಳು.

"ಹುಚ್ಚೀ ಕಣ್ಣು ಒರಿಸು. ಬೆಳಗಾವಿಯಿಂದ ನಿನ್ನ ಒಂದು ತಾರುನಂಬಿ ಬಂದೆ. ಮತ್ತೆ ದರಕಾರ ಇಲ್ಲಾ ಅಂತ ಅಂತೀ.........ಮನುಷ್ಯನಿಗೆ ಏನಾದರೂ.......? "

" ನಾಚಿಕೆ ಅಹುದೇ ಅಲ್ಲೋ ? " ಯಾಯಾ ಕೂಡುತ್ತ ಅಣಕಿಸಿದಳು. "ಮೂರು ಬಿಲ್ಲಿಯ ಕಾರ್ಡಿಗೆ ದಾದ ಹತ್ತಲಿಲ್ಲ. ಮೂರು ರೂಪಾಯಿ ತಾರಿಗೆ ಕಿವಿ ಕೇಳಿಸಿದವಲ್ಲ ? "

—ಬಾಸಿಂಗಬಲ

" ನಿನ್ನ ಪಾಕೀಟು, ತಾರು ಇಂದು ಮುಟ್ಟಿದವು. "

" ಇಂದ ? "

" ಹೂಂ. ನಿನ್ನ ಪತ್ರ ಬಂದ ದಿನ ನನಗೆ ಮೈತುಂಬ ಜ್ವರ. ಆ ದಿನ ಬಂದ ಪತ್ರ ಅವ್ವ ಬಚ್ಚಿಟ್ಟಳು. ಅದು ಇಂದು ದೊರಕಿತು. ತಾರು ಇಂದೇ ಸಿಕ್ಕಿತು. "

" ಹೌಂದು ? " ಗೊಂದಲದಿಂದ ಯಾಯಾ ಅಂದಳು.

" ಈಗ ಆರಾಮು ಆದೀರೋ ಇಲ್ಲೋ ?....ಬೀಮಾರಿ ನನ್ನ ಬಾಯಿ- ಈಟೂ ತಿಳಿಯಬಾರದು ನನಗ ? "

" ಬಂದ ಕಾರಣ ಹೇಳಲಿಲ್ಲಲ್ಲಾ ? "

" ಅಹುದು. "

" ಏನು ? "

" ನಾಳೆ ನನ್ನ ಮದುವಿ. "

" ಯಾರ ಕೂಡ ? "

" ಲೋಕಾಪುರದ ಗೌಡನ ಕೂಡ. "

" ಆ ಜಗಳ ಗಂಟ ? "

" ಹೂಂ "

" ನೀ ಒಪ್ಪಿದಿಯಾ ? "

" ಒಪ್ಪಲಿಲ್ಲ. ಒತ್ತಾಯ ತಂದಾರ. "

" ಒಪ್ಪದಿದ್ದರ.... ? "

" ಕಡದು ಬುಟ್ಟ್ಯಾಗ ತುಂಬತಾರಂತ. "

" ಅದಕ್ಕ ನಾಯೇನು ಮಾಡಬೇಕು ? "

" ನಾ ಹೇಳಿದ್ದು ಮಾಡತೀರಿ ? "

" ಇಲ್ಲದ್ದು ಮಾಡಂದರ ? "

" ಇಲ್ಲದ್ದು ಒಮ್ಮೆ ಮಾಡಿದ ಮ್ಯಾಲ ಇನ್ನೊಮ್ಮೆ ಮಾಡಾಕ ಏನ ಖತಿ ? "

" ಏನು ? "

" ಬಿರಂಜಿ ದಿನ ನೆಪ್ಪ ಐತೇನ ? "

" ಏನು ? "

" ತೋಟದಾಗ. "

" ಹೂಂ .......ಅಂದ....ಕೈತಪ್ಪಿತು. "

" ಕೈತಪ್ಪಿಧಾಂಗ ಬಾಯೂ ತೆಪ್ಪತೈತೇನ ? "

" ಏನು ? "

" ಅಂದ ಕೊಟ್ಟ ಮಾತು ಇಂದೂ ನೆಪ್ಪ ಐತೇನ ? "

" ಯಾಯಾ ಮಾತೇನೋ ಕೊಟ್ಟೆ ಆಗ. ಅದನ್ನ ಈಗ ಉಪಯೋಗಿಸತೀಯಾ ? "

" ನಿಮ್ಮನ್ನ ಪೇಚಿನಾಗ ಸಿಗಸಬೇಕೂ ಅಂತ ನನ್ನ ಇರಾದೆ ಇಲ್ಲ. "

" ಯಾಯಾ ನಿನ್ನ ಅಂಬೋಣಾದರೂ ಏನು ಅದ. ನಾನು ನಿನ್ನ ಮದುವೆ ಆಗಬೇಕೂ ಅಂತ ಅಂತೀಯಾ ? "

" ಮದುವೆ ಆದ್ರ ಅದೊಂದು ಸ್ವರ್ಗ. ಆದರ ನೀವು ಮದುವೆ ಆಗದಿದ್ದರೂ ಚಿಂತೆಯಿಲ್ಲ. ನಿಮ್ಮ ಆಳ ಮಾಡಿಕೋರಿ.....ನಿಮ್ಮ ಕಾಲು ನಾನು ಬಿಡೋದಿಲ್ಲ. "

" ಯಾಯಾ ನಿನಗ ಈ ದಿನ ಆಗೇದಾದರೂ ಏನು ? "

" ಹುಚ್ಚ ಹಿಡದೈತಿ. ನಿಮ್ಮ ಹುಚ್ಚು. "

" ಯಾಯಾ ಇದು ಹ್ಯಾಗ ಶಕ್ಯ ಆಗಬೇಕು ? "

" ಯಾಕರಿ ನನ್ನ ಜಾತಿ ಅಡ್ಡಬರತೈತೇನ್ರಿ ? "

" ಹೂಂ ಅದು ಒಂದು ವಿಚಾರ ಮಾಡತಕ್ಕ ವಿಷಯ. "

" ಜಾತೀ ಜಾತೀ ಮದುವೆಗೆ ಕಾಯ್ದೇನ ಇಂಬ ಮಾಡೇತಿ. "

" ಯಾಯಾ ಆದ ಕಾಯ್ದೇ ರೂಢಿಯೊಳಗ ಬರಬೇಕಾದ್ರ ಒಂದು ಸಾವಿರ ವರ್ಷಬೇಕು. ಜಾತಿ ನಮ್ಮ ದೇಶದೊಳಗ ಅಷ್ಟ ಇಲ್ಲ. ಜಗತ್ತಿನ ತುಂಬ ಅದ ಆರ್ಥಿಕ ಹೆಚ್ಚು ಕಡಿಮೆ, ಬುದ್ಧಿಯ ತಾರತಮ್ಯ, ವೈಯ ರೂಪ ರಂಗಗಳ ಏರಫೇರ ಇರೋತನಕ ಜಾತಿ ಇರೋದೇ. ಒಂದೇ ಜಾತಿ

ಆಗಬೇಕಂತ ಬಹಳ ಸಂತರು ಜೀವಾ ತೆತ್ತರು. ಸಾಧ್ಯ ಆಗಲಿಲ್ಲ. ಬಡ ಕಾಯ್ದೀ ಯಾವ ಗಿಡದ ತೊಪ್ಪಲು. ಹುಟ್ಟುವ ಕೂಸುಗಳ ನಿಯಂತ್ರಣ ಮಾಡತೀಯಾ ಯಾಯಾ ? ''

'' ಧಣೇರ ಈ ರಾಕ್ಷಸನ ಕೈಯಾಗ ಬಾಳ್ವೇ ಮಾಡಂತೀರಾ ? ''

'' ಯಾಯಾ ನಿನಗ ಚೆಲುವುತನ ಅದ. ಬುದ್ಧಿ ಅದ. ಸವಿಯಾಗಿ, ಜಾಣತನದಿಂದ ತರ್ಕಬದ್ಧವಾಗಿ ಮಾತನಾಡಬಲ್ಲೆ. ಇವುಗಳ ಉಪಯೋಗ ಮಾಡಿ ಒಂದು ಅಡಮುಟ್ಟ ಜೀವ ದಾರಿಗೆ ಹಚ್ಚಿದರ ನಿನ್ನಂಥ ಭಾಗ್ಯವಾನ ಹೆಂಗಸು ಯಾರು ? ''

'' ಧಣೇರ ನೀವು ಮದುವೀ ಇಚಾರ ನಡಸೀರೋ ಉಡಕೀದೋ ? ''

'' ಮದುವೀದು. ''

'' ಇದು ನನಗ ಮದವಿ. ಈ ಬಂಟಗ ಇದು ಮೂರನೇ ಉಡಕಿ. ಮೀಸಿಗೆ ಕಲಪು ಹಚ್ಚತಾನು. ರೊಕ್ಕಾ ಸುರುವಿ ಜೀವಾ ಕೊಳ್ಳತಾನು. ಮೊದಲಿನ ಮೂವಾರು ಇವನ ಹೆಸರ್ಲೆ ಕಲ್ಲ ಒಡದು ಭಾವೀ ಬಿದ್ದರು. ಈಟ ನೋಡಿ ನಾನು ಸುಧರಾಸು ಅಂದರ ಏನ ಸುಧರಾಸಬೇಕು ?''

''ಯಾರ ಜೊತೆಗಾದರೂ ನೀನು ಬಾಳುವೆ ಮಾಡುವೆಯೋ ಇಲ್ಲವೋ ಯಾಯಾ ? ''

'' ಯಾರ ಕೂಡಾದರೂ ಬಾಳೀ ಮಾಡೋದು, ಈ ಗೌಡನ ಕೂಡ ಬಾಳೀ ಮಾಡೋದೂ ಒಂದೇ ಏನರಿ ? ''

'' ಒಂದ ಅಲ್ಲ. ಮಾಡೋದಾದರ ನನ್ನ ಕೂಡ ಬಾಳ್ವೆ ಮಾಡುವ ವಳು. ಇಲ್ಲಾದರ ಏನು ಮಾಡುವಿ? ''

'' ನನ್ನ ಒಂದು ಜೀವ ಯಾರಿಗೂ ಬ್ಯಾಡಾಗೇತಿ ಅಂತ ತಿಳಿತೀನಿ. ''

'' ಯಾಯಾ ಜೀವಾ ಕೊಲ್ಲೋದು ಹಗುರ. ಅದರೊಳಗೂ ಬಿದ್ದ ಜೀವಕ್ಕ ಬಾಳು ಬೇಡ. ಯಾಯಾ ವಿಚಾರ ಮಾಡು. ತೋಟದೊಳಗ ಹೂ ಬೆಳೆಯೋದು ಹೆಚ್ಚಲ್ಲ. ಬಂಜರ ಭೂಮಿಯೊಳಗ ಹೂ ಬೆಳದರ ಅದ ನಿನ್ನ ಬುದ್ಧಿಗೆ ಮೂಬದಲು. ''

" ಮೂವತ್ತೆರಡ್ಡು ಹಲ್ಲನೋವು ಏಕ ಟಾಕಿಗೆ ತಡೀಬಹುದು ಧಣೇರ. ಒಂದ ಹಲ್ಲನೋವು ಬಾಳ. ಬೀಳೋತನ ತಾಳಂತೀರಾ? "

" ಬಾಳು ಬೀಳುವತನಕ ನೋವು ತಾಳೂ ಅಂತ ಅನ್ನೋದಿಲ್ಲ. ಯಾಯಾ, ಅದರ ನೋವು ನಿನ್ನ ಮದ್ದಿನಿಂದ, ನಿನ್ನ ಶುಶ್ರೂಷೆಯಿಂದ ಇಲ್ಲವಾಗಲಿ ಅಂತ ಅನ್ನೋದು. "

" ಧಣೇರ ವಾರಗೀ ಒಗೆತನ ಇದ್ದು ಏನೋ ಒಂದು ಕಮತರತ ಇದ್ದರ ಒಬ್ಬರ ತಾಳ್ಮೀಯಿಂದ ಇನ್ನೊಬ್ಬರು ಸುಧರಾಸಬಹುದು. ಆದರ ಹೇಳೀ ಕೇಳೀ ವಿಷ ತಿಂದು ಬದುಕು ಅಂದರ ಹ್ಯಾಗ ತಾಳಲಿ? "

" ಹಾಗಾದರ ಏನಮಾಡಂತೀ? ನನ್ನ ಕೂಡ ಬರತೀಯಾ? "

" ಹೂಂ "

" ಬಂದ ಏನ ಮಾಡತೀ? "

" ನೀವು ಮಾಡು ಅಂತ ಅಂದದ್ದು. "

" ನಿನ್ನ ಮದುವೆ ನನಗೆ ಶಕ್ಯ ಇಲ್ಲ. ನನ್ನ ಕೂಡ ಬಂದು ಏನ ಮಾಡತೀ? "

" ನಿಮ್ಮ ಕೂಲಿಯಾಳು ಆಗತೀನಿ. "

" ಯಾಯಾ ಮನೆಯ ಸುತ್ತೆಲ್ಲ ಅನೀತಿಯ ಭಯ ಹಾಸಿರುವಾಗ ನಮ್ಮ ಮನೆಯಲ್ಲಿ ನೆಮ್ಮದಿಯೆಲ್ಲಿ? "

ಯಾಯಾ ಮೌನವಾಗಿದ್ದಳು.

" ನಿನ್ನ ನೋಟ, ನಮ್ಮ ಸಹವಾಸ, ನಮ್ಮ ಒಟನಾಟ ಇಬ್ಬರನ್ನೂ ಅನೀತಿಯಲ್ಲಿ ಕೆಡಹಲಾರವೇ? ನಿನಗೀಗ ಉಳಿದುದು ಎರಡೇ ಜನ. ಗೌಡ, ನಾನು. ಗೌಡನು ಶ್ರೀಮಂತ. ಮದುವೆಯ ಹುಚ್ಚಿದೆ. ನಿನ್ನ ಧರ್ಮಿಣೀಯು. ನಾನೋ ... ಬಡವ. ನನಗೆ ಮದುವೆ ಒತ್ತಾಯ. ನಾನು ವಿಧರ್ಮಿ. ನನ್ನ ತಾಯಿ ಜೀವ ಬಿಡಬಹುದು. ನಮ್ಮಿಬ್ಬರ ಮದುವೆಯಾಗಿ ತಾಯಿಯ ಕೊಲೆಯಾಗಲೋ? ಅಥವಾ ಗೌಡನ ಜೊತೆಗೆ ಮದುವೆ ಯಾಗಿ ಪ್ರೇಮದ ಕೊಲೆಯಾಗಲೋ? ಹೆಚ್ಚು ವಿಘಾತಕವಾವುದು, ವಿಚಾರ ಮಾಡು. "

---

—ಬಾಸಿಂಗಬಲ

ಯಾಯಾ ಮಾತನಾಡಲಿಲ್ಲ.

" ಯಾಯಾ ನೀನು ಕೇಳಿದ ಮದುವೆಯ ಯಾಚನೆ ಈಗ ಸಹಾ ಯೋಚಿತವಾಗಿದೆ. ಗೋಸಬಾಳದಲ್ಲಿ ನೀನು ಹೀಗೆಯೇ ಕೇಳಿದ್ದರೆ ನಾನು ವಿಚಾರಮಾಡಿ ಹೇಳುತ್ತೇನೆ ಎಂದು ಅನ್ನಬಹುದಾಗಿತ್ತು. ನಾನು ಹಿಂದೆ ಮಾಡಿದ ಸ್ನೇಹ ಈಗ ಮುಕ್ತಿಗೆ ಸಂದಿತು. ಇಂದು ನಾನು ಸ್ವತಂತ್ರ. ನನ್ನ ತಾಯಿ ನನ್ನ ಮದುವೆಗೆ ಹಾತೊರೆಯುತ್ತಿದ್ದಾಳೆ. ಹಳ್ಳಿಯ ಜೀವ ನಕ್ಕೆ ನಿನ್ನಷ್ಟು ಅನುಕೂಲಳಾದ ಸತಿ ಬೇರೊಬ್ಬಳಿಲ್ಲ.....ಆದರೆ?...."

" ಆದರೆ ಏನು "

" ಆದರೆ ನಮಗೆ ಬರುವದು ಧರ್ಮವೊಂದೇ ಅಡ್ಡವಾಗಿದೆ. "

" ನಿಮ್ಮ ಧರ್ಮ ಇಷ್ಟು ಭಡಾಯಿ ಕೊಚ್ಚಬೇಡಿರಿ ಧಣೇರ. "

" ಯಾಯಾ ಧರ್ಮದ ಬಗ್ಗೆ ಅನಾದರ ಬೇಡ. ಪ್ರತಿಯೊಂದು ಧರ್ಮದ ಸ್ಥಾಪಕರೂ ಪ್ರಸಿದ್ಧಪುರುಷರು. ನಿನ್ನ ಧರ್ಮ ಹೆಚ್ಚು, ನನ್ನ ಧರ್ಮ ಕಡಿಮೆಯೆಂದು ನಾನು ಹೇಳಿಲ್ಲ. ಹಾಗೆ ನಾನು ಹೇಳಲಾರೆ. ನಮ್ಮಿಬ್ಬರ ಮದುವೆಯ ಫಲವಾಗಿ ನಾನು ನನ್ನ ಧರ್ಮಕ್ಕೆ ಬಾಹಿರ. ನೀನು ನಿನ್ನ ಧರ್ಮಕ್ಕೆ ಬಾಹಿರಳು. ನಾವಿಬ್ಬರೂ ನಮಗಾಗುವ ಸಂತತಿ ಮೂರನೆಯ ಧರ್ಮ ಸ್ವೀಕಾರಮಾಡೋಣವೇ? ಹಿಂದೂ ಸಂಸ್ಕೃತಿಯಲ್ಲಿ ಧರ್ಮ ಮತ್ತು ನೀತಿ ಮುಖ್ಯ. ಧರ್ಮದಿಂದ ದೇಶ ಕಟ್ಟಿದ್ದೇವೆ. ನೀತಿಯಿಂದ ಸಮಾಜ ನಿರ್ಮಿಸಿದ್ದೇವೆ. ಧರ್ಮಹೀನರಿಗೆ ನೀತಿಹೀನರಿಗೆ ಸಮಾಜದಲ್ಲಿ ಸ್ಥಾನವಿದೆ. ಆದರೆ ಅವರು ಕಳೆದುಕೊಂಡ ಧರ್ಮ ಕಳೆದುಕೊಂಡ ನೀತಿಯನ್ನು ತಿರುಗಿ ಗಳಿಸಲಾರರು. ಒಮ್ಮೆ ಜಾರಿಹೋದವರು ಜಾರಿಯೇ ಹೋದರು. ತಿರುಗಿ ಬರಬೇಕೆನ್ನುವವರು ಪುನರ್ಜನ್ಮದಲ್ಲಿಯೇ ಬರಬೇಕು. ಒಂದು ಕುಟುಂಬ ದಲ್ಲಿ ಅನೇಕ ಧರ್ಮೀಯರು ಇರುವದು ಪಾಶ್ಚಾತ್ಯ ಸಂಸ್ಕೃತಿಯ ಲಕ್ಷಣ. ಇದು ಜನಾಂಗಕ್ಕೆ ಪೂರಕವೋ ಮಾರಕವೋ ಅಲ್ಪಮತಿಗಳಾದ ನಮಗೆ ತಿಳಿಯುವದು ಶಕ್ಯವಿಲ್ಲ. ಜಗತ್ತಿನಲ್ಲಿ ಇವೆರಡೂ ಶಕ್ತಿಗಳು ದ್ವಂದ್ವವಾ ಗುತ್ತಲಿವೆ. ಒಂದು ಬದಿಗೂ ಜಯವಾಗಿಲ್ಲ. ಒಂದೇ ಸತ್ಯ ಇನ್ನೊಂದು ಅಸತ್ಯ ಎನ್ನುವದೂ ಸಿದ್ಧವಾಗಿಲ್ಲ. ಹೀಗಿರುವಾಗ ಮುಂಧೋರಣೆಯು

ವಿಚಾರಮಾಡದೆ ಇರುವ ಲಗ್ನ. ಭಗ್ನ. ಈ ಜನ್ಮ ಹೇಗೋ ಮುಗಿಸೋಣ. ನಮ್ಮ ಪ್ರೇಮ ಸತ್ಯವಾಗಿದ್ದರೆ ನಮ್ಮಿಬ್ಬರ ಸಮ್ಮೇಲನ ಮುಂದಿನ ಜನ್ಮದಲ್ಲಿ ಸತ್ಯವಾಗಲೇ ಬೇಕು. ಹೋಗು ಸೌಭಾಗ್ಯವತಿಯಾಗು. ನನ್ನ ಪ್ರೇಮ ನನ್ನ ಆಶೀರ್ವಾದ ನಿನ್ನನ್ನು ಯಾವಾಗಲೂ ಸಂತೋಷಿಸಲಿ.''

ಯಾಯಾ ಸಜಲನಯನೆಯಾಗಿ ಸ್ತಂಭಿತ ಮೂರ್ತಿಯಾಗಿದ್ದಳು. ಗೇರುಹಣ್ಣಿನ ಆಶೆಹತ್ತಿ ಗಿಡಹತ್ತಿದಾಗ ಗಿಡವೇ ಕಳಚಿಬಿದ್ದಂತೆ ಅವಳ ದೇಹದಲ್ಲಿ ನಖಶಿಖಾಂತ ಕಾವೇರಿ ವೇದನೆಯು ನರನರಗಳಲ್ಲಿ ಥಳಿ ಹೊಡೆಯುತಿತ್ತು. ಒಂದು ಬದಿಗೆ ಧರ್ಮದ ಬೋರ್ಗಲ್ಲು ಅಜಾನು ಬಾಹುವಾಗಿ ನಿಂತಿರುವಾಗ ಇನ್ನೊಂದೆಡೆಗೆ ತನ್ನ ರೂಪ, ಯೌವನ, ವಿದ್ವತ್ತೆ ಜಾತಕದಲ್ಲಿ ಹೋಳಿಯಾಗುತ್ತಿರುವದನ್ನು ನಿರೀಕ್ಷಿಸುತ್ತಿದ್ದಳು.

ಆಕಾಶದಲ್ಲಿ ಹನಿಯೊಡೆಯಿತು. ಮಳೆಯ ದೊಡ್ಡ ಹನಿಗಳು ಅಲ್ಲಿಯೊಂದು ಇಲ್ಲಿಯೊಂದು ಬೀಳಹತ್ತಿದವು. ಹುಡಿಗೊಂಡ ಭೂಮಿ ಬಿದ್ದ ಹನಿಗಳಿಗೆ ಪ್ರತಿಯಾಗಿ ಧೂಲಿಯ ಓಕುಳಿಯನ್ನು ಎರಚುತ್ತಿತ್ತು. ಸುಳಿಗಾಳಿಯು ಸ್ತಬ್ಧವಾಗಿ ಹನಿಗಳು ಗುರಿಹಿಡಿಯುವದನ್ನು ಸಿದ್ಧಿಸಲು ಸಹಕಾರಿಯಾಗಿತ್ತು.

ಪ್ರಕೃತಿಯು ಇತ್ತ ಈ ಪ್ರೇಮಜೀವಿಗಳನ್ನು ಎಚ್ಚರಿಸುತ್ತಿರುವಾಗ ಅತ್ತ ಹಿಲಾಲ, ಜನರ ಬೈಗುಳ, ಲಾಠೀಚಾರ್ಜಿಗಳ ಸಮ್ಮೇಲನ ಊರ ಹೊರಬದಿಯಿಂದ ಹೊರಟಿತ್ತು. ಅದನ್ನು ನೋಡಿ ಯಾಯಾ ಚಮಕಿತಳಾದಳು. ತುಸುಹೊತ್ತಿನಲ್ಲಿಯೇ ತನ್ನನ್ನು ಕಳಿಸಲು ಬಂದ ಹೆಂಗಸು "ಘಾತವಾಯಿತು. ಗೌಡ ಬಂದ" ಎಂದು ಹೇಳಿದವಳೇ ಓಡಿಹೋದಳು. ಇಬ್ಬರೂ ಅವರ ಕೈಗೆ ಸಿಕ್ಕಿದ್ದರೆ ನುಚ್ಚುನೂರಾಗಬಹುದಿತ್ತು. ಅವಳು ಒಬ್ಬಳು ಸಿಕ್ಕರೂ ಸರಿಯೇ.

ಈ ಸಮಯದಲ್ಲಿ ಪಲಾಯನ ಹೇಳುವದೇ ಸೂಕ್ತವಾಗಿತ್ತು. ಯಾಯಾ ಬಾಬೂನ ಕೈ ಹಿಡಿದಳು.

'' ಧಣೇರ ಬರ್ರಿ. '' ಎಂದಳು.

---

— ಬಾಸಿಂಗಬಲ

" ಎಲ್ಲಿಗೆ? "

" ದೂರ. "

" ಯಾಕ ?"

" ಗೌಡ ಬಂದ. "

" ಬರಲಿ ನನಗೇನು? "

" ಧಣೇರ ನಿಮ್ಮ ಕಾಲಬೀಳತೀನಿ. ಈಗ ನೆತ್ತರ ಹರಿಯೋದು ಬೇಡ. " ಎಂದು ಕೈ ಜಗ್ಗಹತ್ತಿದಳು.

ಬಾಬೂ ನೋಡಿದನು. ಐದಾರು ಜನರಾದರೂ ಇರಬಹುದು. ಆ ಸಮಯದಲ್ಲಿ ಓಡುವದೇ ವಿಹಿತವಾಗಿತ್ತು.

" ಧಣೇರ ಬರ್‍ರಿ. " ಎಂದು ಯಾಯಾ ಮತ್ತೆ ಜಗ್ಗಿದಳು. ಬಾಬೂ ಮೊದಲು ಬಿಗಿ ಹಿಡಿದ. ಕೊನೆಗೆ ಒಪ್ಪಿ ಅವಳ ಬೆನ್ನುಹತ್ತಿದ.

× × × ×

ಊರಿನಿಂದ ಹೊರಟವರು ಐವರು. ಇಬ್ಬರ ಕೈಯಲ್ಲಿ ಹಿಲಾಲುಗಳಿದ್ದವು. ಇಬ್ಬರ ಕೈಯಲ್ಲಿ ಲಾಠಿಯಿದ್ದವು. ಒಬ್ಬನು ಚೂರಿಯನ್ನೋ ಕೈಕೊಡಲಿಯನ್ನೋ ಹಿಡಿದಿದ್ದನು. ಅವರು ಊರಿನಿಂದ ಓಡುತ್ತ ಬಂದು ಆ ಸ್ಥಳ ನೋಡಿದರು. ಇಬ್ಬರೂ ಓಡಿಹೋಗಿದ್ದರು.

" ಎಲಾ ಇವನ ಬೇಟೆ ಓಡಿತು. " ಗೌಡನೆಂದು ಕಿಡಿಕಿಡಿಯಾದನು. ಒಬ್ಬನ ಕೈಯಲ್ಲಿಯ ಹಿಲಾಲುಕಸಿದು ಕಣಿಯ ಕುಣಿಯನ್ನೆಲ್ಲ ನೋಡಿದನು. ಅಲ್ಲಿ ಯಾರೂ ಇರಲಿಲ್ಲ ಮೇಲೆ ಏರಿಬಂದನು. ಮೇಲೆ ನಿಂತ ನಾಲ್ವರು ಗೌಡನ ಮುಂದಿನ ಆಜ್ಞೆಯನ್ನು ಲಕ್ಷಿಸುತ್ತಿದ್ದರು. ಅವನು ಕೈ ಹಿಗ್ಗಿಸಿ ಎತ್ತರವಾಗಿ ತಲೆಯದಾಟಿ ಹಿಲಾಲ ಹಿಡಿದು ದೂರದವರೆಗೆ ನಿರೀಕ್ಷಿಸಿದನು. ದೂರದಲ್ಲಿ ಹೆರಳುಗಳುರುಳಿದ ಸಪ್ಪಳವಾಯಿತು. ಯಾರೋ ದಿಬ್ಬದ ಬದಿಗೆ ಓಡುತ್ತಿರುವದು ಅಸ್ಪಷ್ಟವಾಗಿ ಕಾಣಬಂತು.

" ದಿಬ್ಬ. " ಗೌಡ ಆಜ್ಞೆ ಕೊಟ್ಟನು.

ಐವರೂ ಮತ್ತೆ ಓಡಹತ್ತಿದರು.

ಊರಿನಿಂದ ಕುಣಿಯ ವರೆಗಿರುವ ನೆಲವು ಸಮವಾಗಿತ್ತು. ಮುಂದಿನ ಹೆಜ್ಜೆ ಬಿಗಿಯಾಯಿತು. ನಿತ್ಯವೂ ಓಡಾಡಿದವರಿಗೆ ಸುಲಭವಾದ ದಾರಿಯದು

ಎಡವಿದವರು ಚಂದ್ರನನ್ನು ತೆಗಳಿದರು. ಬಿದ್ದವರು ಮಳೆಯನ್ನು ಬೈದರು. ಡಿಕ್ಕಿ ಹೊಡಿದವರು ಕುಣಿಗಳ ಏಜಂಟನನ್ನು ಶಪಿಸಿದರು.

ಪ್ರಕೃತಿ ಕ್ರೂರವಾಗುತ್ತ ನಡೆದಿತ್ತು. ಆಕಾಶದಲ್ಲಿಯ ಮೋಡಗಳ ಹಾಸಿಗೆ ದಟ್ಟವಾಗುತ್ತ ನಡೆದಿತ್ತು. ಹನಿಹನಿಯಾಗಿ ಬೀಳುವ ಮಳೆ ರಪ ರಪ ಹೊಡೆಯಹತ್ತಿತು. ಹನಿಗಳ ಹೊಡೆತಕ್ಕೆ ಥಟಥಟಗೊಂಡ ಹಿಲಾಲು ಕ್ರಮವಾಗಿ ಮಖಿನವಾಗಿ ಕೊನೆಗೆ ಆರಿಹೋಯಿತು. ಇತ್ತ ಕತ್ತಲೆಯೂ ದಟ್ಟವಾಗಹತ್ತಿತು. ಓಡಿಓಡಿ ದಿಬ್ಬದ ನೆತ್ತಿಗೆ ಬಂದರೂ ಅವರಿಗೆ ಯಾರೂ ಸಿಕ್ಕಲಿಲ್ಲ. ಓಟದಸಪ್ಪಳವೂ ಮಳೆಯ ರಭಸದಲ್ಲಿ ವಿಲೀನವಾಯಿತು.

ಮೀಸೆ ಹುರಿಮಾಡುತ್ತಿದ್ದ ಗೌಡನಿಗೆ ವಿಪರೀತ ಸಿಟ್ಟು ಬಂದಿತು. ಆದರೆ ಆಗ ಕೇವಲ ಉದ್ರೇಕಗೊಂಡು ಉಪಯೋಗವಿರಲಿಲ್ಲ. ರಾತ್ರಿ ಕಳೆಯುವಷ್ಟರಲ್ಲಿ ಬೆನ್ನಟ್ಟಿ ಅವರನ್ನು ಹಿಡಿಯಲೇಬೇಕಾಗಿತ್ತು. ಕೇವಲ ಬೈಗುಳದವಾಳಿಗೆ ಸಿಟ್ಟಿನ ತುರುಸಿಗೆ ಕೆಲಸವಾಗುವಂತೆ ಇರಲಿಲ್ಲ.

ರಸ್ತೆಯ ದಿಕ್ಕಿನಿಂದ ಯಾರೋ ಚೀರಿದ ಸಪ್ಪಳ ಹೊನ್ನನಿಗೆ ಕೇಳಿಸಿತು. ಹೊನ್ನನ ಬದಿಯವನು ಕೇಳಿದನು. ಗೌಡನಿಗೂ ಅದು ಕೇಳಿಸಿತು. ಆದರೂ ಸಂಶಯ.

"ರಸ್ತೇದಿಂದ ಚೀರಿಧಾಂಗ ಆಯಿತಲ್ಲ. ಹೊನ್ನಾ."

"ಹೌಂದರಿ."

"ಹಾಂಗಾರ ಓಡರಿ ರಸ್ತೇಕಡೆ."

ಎಲ್ಲರೂ ರಸ್ತೆಯ ಕಡೆಗೆ ನಡೆದರು. ರಸ್ತೆ ಇನ್ನೊಂದು ಕಾಲುಮೈಲು ಇರುವಾಗ ಬೀದಿಯಲ್ಲಿ ಒಂದು ಕಪ್ಪಾದ ಚೌಕುಮನೆ ನಿಂತಿತ್ತು. ಅದು ಟೂರಿಂಗ ಕಾರು.

---

—ಬಾಸಿಂಗಬಲ

" ಹೊನ್ನಾ ಕಾರು. " ಗೌಡ ತಡೆದನು.

" ಹಂ. ರಿ ಗೌಡರ. ಸಖೂರ, ಪಿಸ್ತೂಲಗಿಸ್ತೂಲ ತಂದಿದ್ದರ.... "

" ಪಿಸ್ತೂಲ ಹಾರ ಹೊಡಿಯೋಣು ಬಾ'' ಎನ್ನುತ್ತ ಗೌಡ ಎದೆ ಯುಬ್ಬಿಸಿ ನಡೆದ

ಆದರೂ ಎಲ್ಲರೂ ನಿಧಾನವಾಗಿಯೇ ನಡೆದರು. ಗೌಡನಿಗೂ ಅಧೈರ್ಯ. ಜೀವ ಯಾರಿಗೆ ಬೇಸರಿಕೆ. ಅಂಜಿಕೆ ಅಡಿತೋರಿಸಿದರು ಬೆಂಬಲಿಗರು. ಅಂಜಿಕೆ ಹತ್ತಿಕ್ಕಿ ಮುಂದರಿದನು ಗೌಡ. ತಮ್ಮ ತಮ್ಮ ಆಯುಧಗಳನ್ನು ಬಿಗಿಬಿಗಿಯಾಗಿ ಹಿಡಿದರು. ಸಜ್ಜಾಗಿ ಹಿಡಿದರು.

ಕಾರಿನ ಬಾಗಿಲ ಬಿಗಿಯಿತು. ಕೀಲಿತಿರುವಿದ ಸಪ್ಪಳವಾಯಿತು ಚಕ್ಕನೆ ಕಾರಿನ ದೀವಿಗೆಗಳು ಹೊಳೆದವು. ಕಾರು ಹೊರಟಿತು.

" ಹುಂ. " ಗೌಡನ ಆಜ್ಞೆಯಾಯಿತು.

ಐವರೂ ಓಡಿದರು. ಕಾಲು ನೋಯುವಂತೆ ಓಡಿದರೂ ಹೆಬ್ಬೆರ ಳಿಗೆ ಕಾರಿನ ಹಿಂದಿನ ಗುಮುಟಿ ತಾಕಿ ಜಾರಿಹೋಯಿತು. ಕಾರಿನ ವೇಗ ಹೆಚ್ಚಾಗಿ ಬೆಂಬಲಿಗರನ್ನು ಹಿಮ್ಮೆಟ್ಟಿಸಿತು. ಐವರೂ ಓಡಿಓಡಿ ತೇಕುತ್ತ ನಿಂತರು.

" ಹೊನ್ನಾ ನಮ್ಮ ಅಂದಾಜ ತಪ್ಪಿತು." ಗೌಡನೆಂದ.

" ಹೌಂದರಿ ಗೌಡರ. '' ಹೊನ್ನ ತೇಕುತ್ತ ಅಂದನು. "ಈ ಬಿಳೀ ತೊಗಲಿನವರ ಕಾಲ ನಡಮಂತ್ರ ಅಂತ ಗೊಂತಾಗಲಿಲ್ಲರಿ. ನಮ್ಮ ಆ ಡಬಲ್‌ಬಾರಿನ ಬಂದೂಕ ಕರತದ್ದೆನರ‍್ರಿ ಮಿಕಾ ಹೊಡಿಯೋದು. ಈ ಕಾರ ನೋಡತಿದ್ದೆ....ಗೌಡರ ಇನ್ನ ಮುಂದ "

" ನಾಳೆ ಪೇಶಲ್ ಕಾರಮಾಡಿ ಕ್ವಾಟೆಗೆ. ಹೋಗೋಣು. "

" ಗದ್ದನಕೇರಿ ಕತ್ತರಿಮುಟ ಕ್ವಾಟೆ ಅಂತ ಅನ್ನಬಹುದು. ಕತ್ತ ರಿಗೆ ಕ್ವಾಟೆನೂ ಆಗತೈತಿ, ಎಡಿಕಬಿದ್ದರ ಬೀಳಗಿ ವಿಜಾಪುರಾನೂ ಆಗ ತೈತಿ. ಎತ್ಲಾ ಹೋಗೆನರೋ ಯಾಂಬಲ್ಲ. "

" ನಾಳೆ ಪೇಶಲ್ ಕಾರಮಾಡಿ ಕ್ವಾಟೆ ಇಜಾಪುರ ಎರಡೂ ಸುತ್ತಾ ಡೂಣು. ''

" ಗೌಡರ ನೀವ ಬೇಕಾದರ ನನ್ನ ನ್ಯಾಕ ಬೆಯ್ಯರಿ. ಈ ವೆವಾರ ದೊಳಗ ತೆಪ್ಪಿದಿರಿ ಗೌಡರ. ಒಂದ ಎಡ್ಡದಿನಾ ಮೊದಲ ನನಗ ನೀವು ವರ್ದಿಕೊಟ್ಟಿದ್ದರ ನಾಲ್ಕ್ಯೂರ ಹೊಲೆಯರ್‍ನ, ತಳವಾರನ್ನ ಹಿಡಿದು ಊರಿಗೆ ಊರ ಕಾವಲೂ ಇಡತಿದ್ನಿ....ತೆಪ್ಪಿದಿರಿ ಗೌಡರ. "

" ತಾರವಾಡಿದ ಸುದ್ದಿ ನನಗ ನಿನ್ನೇ ಮುಟ್ಟಿತು. ಅದಕ್ಕಾ ಈ ಹೊತ್ತು ಈಟ ಗುದ್ಯಾಡಬೇಕಾತು. "

" ಆತನಡ್ರಿ. ನಾಳೆ ಕ್ವಾಟೆ ಇಜಾಪುರ ಸೋಸಿ ಹುಡುಕೂಣು ಅಂತ. "

ಎಲ್ಲರೂ ಇಳಿಮೊಗದಿಂದ ಊರದಾರಿ ಹಿಡಿದರು.

---

## ೧೨. ನೀಮಡಿಯ ಝೋಪಡಿ. * * *

ಬಾಬೂ, ಯಾಯಾ ಇಬ್ಬರೂ ಓಡುತ್ತ ದಿಬ್ಬದ ಬದಿಗೆ ನಡೆದರು. ಅಂಗೈಯಂತಿದ್ದ ಯಾಯಾನ ಕಾಲನೆಲ ಅವಳ ಓಟಕ್ಕೆ ಹಿಂದೆ ಓಡುತ್ತಿತ್ತು. ಜೀವನ ಉದಾರತನ ಅವಳ ಕಾಲಶಕ್ತಿಗೆ ಹೆಚ್ಚಿನ ಬಲ ತಂದಿತ್ತು. ತಗ್ಗು, ದಿನ್ನೆ, ಕಟ್ಟೆ, ಘಡಿಗಳೆಲ್ಲವೂ ಅವಳಿಗೆ ಪರಿಚಿತವಾಗಿದ್ದವು. ಚಿಕ್ಕವಳಿದ್ದಾಗ ಹೆಂಡೆಹಿಡಿಯಲು ಹೋದದ್ದು,'ಎಮ್ಮೆ ಕಾಯಲು ಹೋದದ್ದು, ಸೌದೆ ಕಡಿಯಲು ಹೋದದ್ದು ಅವಳಿಗೀಗ ಉಪಯೋಗವಾಯಿತು. ಗಿಡ, ಕಂಟಿ, ಹೊಳವು ಏರು ಇಳುವು ಅವಳ ಕತ್ತಲೆಯ ಕಣ್ಣಿಗೂ ನಿಚ್ಚಳ ಕಾಣುತ್ತಿದವು.

ಏರಿ ಮುಟ್ಟಿದಾಗ ದಾರಿ ತಪ್ಪಿತೆಂದು ಅವಳಿಗೆ ತಿಳಿಯಿತು. ಅವಳು ಬಲಕ್ಕೆ ಹೊರಳಿ ನಡೆದಳು. ತಪ್ಪಿದ ದಾರಿ ಸಿಕ್ಕಲಿಲ್ಲ. ದಾರಿಯ ಶೋಧನೆ

ಯಲ್ಲಿ ಬೆಂಬಳಿಸಿದವರ ಬಲೆಯಲ್ಲಿ ಬೀಳಬಾರದೆಂದು ಅವಳು ರಸ್ತೆಯ ಕಡೆಗೆ ಓಡಿದಳು. ಬಾಬೂನು ಬೆನ್ನಟ್ಟಿದ.

ಮಳೆಯು ಧೋ ಧೋ ಎಂದು ಹೊಡೆಯಹತ್ತಿತು. ದಾರಿ ಇನ್ನೂ ದೂರದಲ್ಲಿರುವಾಗ ಕಾರು ಕಂಡಿತು. ಅದರ ಪ್ರಖರವಾದ ಬೆಳಕು ಅವಳ ಕಣ್ಣುಗಳನ್ನು ಆಕಸ್ಮಾತ್ತಾಗಿ ಕುಕ್ಕಿಬಿಟ್ಟಿತು. ಅವಳ ಅಂದಾಜು ತಪ್ಪಿ ಕಲ್ಲ ಕುಣಿಯಲ್ಲಿ ಕಾಲು ಜಾರಿತು. ಅವಳು ಚಿಟ್ಟನೆ ಚೀರಿ ತಳಕಂಡಳು.

ಚೀರುವ ಧ್ವನಿ ಕೇಳಿ ಕಾರು ನಿಂತಿತು. ಒಳಗಿನವರು ಹೊರಗಿಳಿದು ಬಂದರು. ದಾರಿಯ ಪಕ್ಕದಲ್ಲಿ ಅವರಿಗೆ ಯಾರೂ ಕಾಣಲಿಲ್ಲ. ದೀವಿಗೆ ಆರಿಸಿ ನೋಡಿದರು. ಹೊರಗೆ ನಿಂತು ಆಲಿಸಿದರು. ಯಾರ ಸುಳಿವೂ ಹತ್ತಲಿಲ್ಲ. ನಿರಾಶರಾಗಿ ಬೆಳಕು ಬಿಟ್ಟು ಬಾಗಿಲ ಮುಚ್ಚಿ ಕಾರು ಹೊಡೆದು ಕೊಂಡು ಹೋದರು. ಗೌಡ ಮತ್ತು ಅವನ ಸಂಗಡಿಗರು ಇದೇ ಕಾರನ್ನೇ ಹಿಂಬಾಲಸಿದ್ದುದು.

ಬಾಬೂ ಇಳಿದ ಕಣಿ ಬಹಳ ಆಳವಾಗಿತ್ತು. ಅವಳು ಬಿದ್ದ ಬದಿಯಿಂದಲೇ ಇವನೂ ಬಿದ್ದಿದ್ದರೆ ಇಬ್ಬರೂ ಅಲ್ಲಿಯೇ ಬೀಳುತ್ತಿದ್ದರೇನೋ ? ಯಾಯಾ ಚಿಟ್ಟನೆ ಚೀರಿ ಕುಣಿಯಲ್ಲಿ ಬಿದ್ದಾಗ ಬಾಬೂ ಬೆದರಿ ಗಕ್ಕನೆ ನಿಂತನು. ಕಣ್ಣುಗಳನ್ನು ಅಗಲಿಸಿ ನೋಡಿದನು. ಕುಣಿ ಆಳವಾಗಿತ್ತೇನೋ ನಿಜ, ಆದರೆ ಕಡಿಯುವವರಿಗಾದರೂ ಇಳಿಯುವ ದಾರಿ ಬೇಕಲ್ಲವೇ ?

ಬಲಬದಿಯಿಂದ ಇಳಿಯಲು ಅನುಕೂಲವಾಗಿತ್ತು. ಅವನು ಸಾವಕಾಶವಾಗಿ ಇಳಿಯಹತ್ತಿದನು. ಮಳೆಯು ಕೆನ್ನೆಗ ಹೊಡೆದು ಸೇಡು ತೀರಿಸುತ್ತಿತ್ತು. ಚೂಪಾದ ಏಣುಗಳು ನೀರುಂಡು ಜಂಗು ತಿಂದ ಕತ್ತಿಯಂತೆ ಮೊಂಡವಾಗಿದ್ದವು. ಕಾಲು ಇಟ್ಟರೆ ಜಾರಿಸುತ್ತಿದ್ದ ಕಲ್ಲು ಬುಕಣಿಯು ಹಾಸು ನೆಲಗಟ್ಟಿನಂತೆ ಬಿಗಿಯಾಗಿತ್ತು. ಬಾಬೂ ಸಾವಕಾಶವಾಗಿ ಇಳಿದು ಕುಣಿಯ ಬುಡ ಕಂಡನು. ಕುಣಿಯಲ್ಲಿ ಮಳೆಯ ನೀರು ಮಡುಗಟ್ಟುತ್ತಿತ್ತು. ಇನ್ನೂ ಅರ್ಧ ತಾಸು ತಡೆದಿದ್ದರೆ ಅದು ತುಂಬುತ್ತಿತ್ತು. ಕಣ್ಣಿದ್ದರೂ ಈಗ ಕಾಲು ಕೈಗಳ ಸಂಪರ್ಕವೇ ದಾರ್ಶನಿಕ ಕೆಲಸ ಮಾಡುತ್ತಿ

ದ್ದವು. ಚಲ್ ಚಲ್ ನೀರು ತುಳಿಯುತ್ತ ಬಾಬೂ ಹುಚ್ಚನಂತೆ ಅವಳನ್ನು ಹುಡುಕಿದನು. ಈ ಅಸಹಾಯ ಸ್ಥಿತಿಯಲ್ಲಿ ಅವನಿಗೆ ಅಳುವೂ ಬಂದಿತು. ಪ್ರಕೃತಿಯ ರುದ್ರಭೀಕರ ಕಾರ್ಯದ ಒಂದು ಸೆಳಕು ಸಜೀವ ಜಂತುಗಳನ್ನು ನಿಲ್ಲಿಸಿ ಹೇಗೆ ಜೀವ ಹಿಂಡಬಹುದೆಂಬುದರ ಪ್ರತ್ಯಕ್ಷ ಪ್ರಮಾಣ ಅವನಿಗಿಂದು ಅನುಭವಕ್ಕೆ ಬಂದಿತು. ಒಂಟಿಗಳಾದ, ಪ್ರಜ್ಞೆ ತಪ್ಪಿರಬಹುದಾದ ಯಾಯಾನನ್ನು ಕ್ಷಣ ಕ್ಷಣವೂ ಸಾವು ಸಮೀಪಿಸುತ್ತಿತ್ತು. ಒದರಿ ಅವಳನ್ನು ಎಚ್ಚರಿಸೇನೆಂದರೆ ಕರೆಯು ತಮ್ಮಿಬ್ಬರ ಕ್ರೂರಸಾವನ್ನು ಬರಮಾಡಬಹುದಿತ್ತು. ದುಃಖವನ್ನು ಅದುಮಿ, ಉಕ್ಕುವ ಅಳಲನ್ನು ಹತ್ತಿಕ್ಕಿ ಅವನು ಹುಚ್ಚನಂತೆ ಕುಣಿಯ ತಳವನ್ನು ಸೋಸಿದನು. ಮಡುಗಟ್ಟಿದ ನೀರಿನಲ್ಲಿ ತುಳಿದಾಡಿದನು. ಯಾಯಾನ ಒಂದು ಕೂದಲೂ ಕೈಗೆ ಹತ್ತಲಿಲ್ಲ.

ಅವನಿಗೆ ಅಚ್ಚರಿಯಾಯಿತು. ಅವನು ಒಂದೆಡೆಗೆ ನಿಂತು ಬಿದ್ದ ಬದಿಗೆ ನೋಡಿದನು. ಅದು ಸಂಪೂರ್ಣವಾಗಿ ಕಡಿದಾಗಿರಲಿಲ್ಲ. ಅರ್ಧ ಭಾಗದವರೆಗೆ ಕಡಿದಾಗಿದ್ದು ಅರ್ಧಕ್ಕೆ ಮೆಟ್ಟಿಲುಗೊಂಡು ಮತ್ತೆ ಕಡಿದಾಗಿತ್ತು. ಬಾಬೂ ಆ ಬದಿಯ ನೀರಿಗೆ ಬಂದನು. ಕೈಗಳೆತ್ತಿರಿಸಿ ಆಡಿಸಿದನು. ಕೈಗಳಿಗೆ ನೇಲುಬಿದ್ದು ಯಾಯಾನ ಕಾಲುಗಳು ತಗುಲಿದವು. ಅವನು ಉತ್ಸಾಹಿತನಾಗಿ ಕಡಿದಾದ ಬದಿಯನ್ನು ಕೈಕಾಲುಗಳ ಸಹಾಯದಿಂದ ಏರಿದನು. ಮೆಟ್ಟಲಿನ ಮೇಲೆ ಯಾಯಾನ ಶರೀರ ಬಕ್ಕಬೋರಲು ಬಿದ್ದಿತ್ತು. ಬಾಬೂ ಅದನ್ನು ಹೊರಳಿಸಿದನು. ಮಳೆಯ ಹೊಡೆತದಿಂದ ಸರ್ವಾಂಗವೆಲ್ಲವೂ ತೊಯ್ದು ತಪ್ಪಡಿಯಾಗಿತ್ತು. ಬಾಬೂ ಅವಳ ಶರೀರವನ್ನು ಹೆಗಲಿಗೆ ಏರಿಸಿದನು.

ಅವನು ಎಡಕ್ಕೂ ಬಲಕ್ಕೂ ನೋಡಿದನು. ಕುಣಿಯ ಮೇಲೆ ಏರಲು, ಆ ಭಾರವನ್ನು ಹೊತ್ತುಕೊಂಡು, ಅವನಿಗೆ ಶಕ್ಯವಾಗುತ್ತಿರಲಿಲ್ಲ. ಅವನಿಗೆ ಈಗ ಎರಡೇ ಮಾರ್ಗಗಳಿದ್ದವು. ಇದ್ದ ಭಾರದಿಂದ ಕುಣಿಯೊಳಗೆ ಹಾರುವದು. ಅವನು ನಿಂತಸ್ಥಳದಿಂದ ಕುಣಿಯ ತಳ ಒಂದು ಆಳು ಎತ್ತರವಾಗಿತ್ತು. ಇಲ್ಲವೆ ಆ ದೇಹವನ್ನು ಇದ್ದಂತೆ ಇಟ್ಟು ಕುಣಿಯಲ್ಲಿ ತಾನೊಬ್ಬನೇ

ಇಳಿವುದು, ಮತ್ತು ಅಲ್ಲಿಂದ ಅವಳ ದೇಹವನ್ನು ಸಾವಕಾಶವಾಗಿ ಎಳೆದು ಕೊಳ್ಳುವದು. ಮೊದಲನೆಯುದರಿಂದ ಇಬ್ಬರಿಗೂ ನೋವಾಗುವ ಸಂಭವ ವಿತ್ತು. ಎರಡನೆಯದರಿಂದ ಅವಳಿಗೊಬ್ಬಳಿಗೆ ನೋವಾಗಬಹುದಿತ್ತು.

ಬಾಬೂ ನಿಂತಲ್ಲಿಂದಲೇ ವಿಚಾರಿಸಿದನು ಜಿಗಿದುಬಿಡೋಣ ಎಂದು. ವಿಚಾರ ಬಂದಕೂಡಲೇ ಕೃತಿಗೂ ಸಿದ್ಧವಾದನು. ಅವನು ಜಾಗರೂಕ ವಾಗಿ ಜಿಗಿದನು.

ಹೆಗಲ ಮೇಲಿನ ಶರೀರ ಘಲ್ಲಿಸಿದ ಹಾಗಾಯಿತು. ಕಾಲುಗಳಿಂದ ಕುಣಿಯ ನೀರು ಚಿಮ್ಮಿತು. ಬಿರುಸು ನೆಲವು ಕಾಲ ತಳಗಳನ್ನು ಮೊಳ ಕಾಲದ ವರೆಗೆ ನೂಕಿತು.

ಬಾಬೂ ಒಂದು ಕ್ಷಣಹೊತ್ತು ನಿಂತು ಸುಧಾರಿಸಿಗೊಂಡನು. ಸಾವ ಕಾಶವಾಗಿ ಹತ್ತುತ್ತ, ಕುಣಿಯ ಮೇಲುಗಡೆ ಬಂದನು. ಕುಣಿಯ ಮೇಲ್ಗಡೆ ನಿಂತು ನಾಲ್ಕೂ ಕಡೆಗೆ ನಿರೀಕ್ಷಿಸಿದನು. ಬೆನ್ನ ಹಿಂದೆ ಲೋಕಾಪುರವು ನಿಂತಿತ್ತು. ಅದು ಅವನಿಗೆ ಬೆಂಕಿಪುರವಾಗಿತ್ತು. ಬಲಬದಿಗೆ ಬಾಗಿಲು ಕೋಟೆ ಬೆಳಗಾವಿ ರಸ್ತೆ ಹರಿದಿತ್ತು. ಎಡಗಡೆಗೆ ಇದೇ ತಾನೇ ಹಿಂದಿರುಗಿದ ದಿಬ್ಬ ಮೂಗು ಏರಿಸಿ ನಿಂತಿತ್ತು. ಎದುರಿಗೇ ಹೋಗುವದು ವಿಹಿತವೆಂದು ಬಾಬೂ ವಿಚಾರಿಸಿ ಎದುರಿಗೇ ನಡೆದನು.

ಮಳೆಯ ರಭಸ ಇನ್ನೂ ಕಡಿಮೆಯಾಗಿರಲಿಲ್ಲ. ಆದರೆ ಮೊದಲಿ ನಷ್ಟು ಉಗ್ರತೆ ಈಗ ಇರಲಿಲ್ಲ. ಹನಿಗಳ ಗಾತ್ರವೂ ಕಡಿಮೆಯಾಗಿತ್ತು.

ಮೊದಲಿನಕಿಂತಲೂ ಈಗ ಹೆಚ್ಚಿಗೆ ಜಾಗರೂಕತೆಯಿಂದ ನಡೆಯ ಬೇಕಾಯಿತು. ಆಗ ಕೇವಲ ಕುಣಿಗಳಾಗಿದ್ದ ಕಣಿಗಳು ಈಗ ಕಮಲವಿ ಲ್ಲದ ಕಾಸಾರಗಳಂತಾಗಿದ್ದವು. ದಿನ್ನೆಯಿಂದ ಹರಿದು ಬಂದ ನೀರು ಅವೆಲ್ಲ ವುಗಳನ್ನು ತುಂಬಿಸಿತ್ತು. ಒಂದೆರಡು ಕಡೆಗೆ ಹಳ್ಳದಂತೆ ಹರಿಯುತ್ತಲೂ ಇತ್ತು. ನೆತ್ತಿಯ ಮೇಲೆ ಗುಡುಗು, ಬೀಳುತ್ತಿರುವ ಹನಿಗಳ ಚಲ್ಲಾಟ, ವಿವಿಧ ರೀತಿಯಿಂದ ಹರಿಯುತ್ತಿರುವ ನೀರಿನ ಗುದ್ದಾಟ, ಅಂಟಿಸಿಕೊಂಡ ಎಲ್ಲ ನೀರನ್ನು ಗಾಳಿಯ ಚಪಲದಿಂದ ಬೀಳಿಸುವ ಗಿಡಗಳ ನೀರಥಳಿ,

ಬಿರ್ರನೆ ಬೀಸಿ ಬದಿಗೆ ಬೀಳುವ ಗಾಳಿಯ ಒತ್ತಡ, ಎಲ್ಲವೂ ಸೇರಿ ಕಿವಿಗಳಿದ್ದವರ ಕಿವಿಗಳನ್ನು ಕಿವುಡು ಮಾಡುತ್ತಿದ್ದವು.

ಬಾಬೂ ನಡೆದನು. ನಡೆದೇ ನಡೆದನು. ವಿಧಿಯಿಲ್ಲದೆ ನಡೆದನು. ನಡೆಯದೆ ನಡೆಯದೆಂದು ನಡೆದನು.

ಹೊತ್ತ ಶರೀರದಲ್ಲಿ ಜೀವವಿತ್ತು. ಆದರೆ ಶರೀರದ ಯಾವ ಬದಿ ತೊರೆದಿದೆಯೋ, ಯಾವ ಎಲುಬು ಮುರಿದಿದೆಯೋ, ಎಲ್ಲಿ ಘಾಯವಾಗಿ ನೆತ್ತರ ಚಿಮ್ಮಿದೆಯೋ, ಅಂತೂ ವಿವಿಧ ತರ್ಕವನ್ನೇ ಮಾಡಬೇಕಿತ್ತು. ಹೊರತಾಗಿ ಮೈತುಂಬ ನೋಡಿ ಚಿಕಿತ್ಸೆಗೆ ಅಣಿಯಾಗಲು ಶಕ್ಯವಾಗಲಿಲ್ಲ.

ಈ ತೊಳಲಾಟದಲ್ಲಿ ಮೋಣಗಮುಟದ ತನ್ನ ಚೀಲವನ್ನು ಅವನು ಬಿಟ್ಟಿರಲಿಲ್ಲ. ಅದರಲ್ಲಿ ಒಂದೆರಡು ಒಣ ಅರಿವೆಗಳಿದ್ದವು. ಅವುಗಳನ್ನು ಬದಲಿಸಿ ಮೈಗೆ ಮೆತ್ತಿದ ಚಳಿಯನ್ನು ಕಳೆಯಬಹುದಿತ್ತು. ಆದರೆ ಎಲ್ಲಿ? ಒಂದು ಗುಡಿ, ಒಂದು ಗಿಡ, ಒಂದು ಗುಡಿಸಲು ಯಾವುದೂ ಅವನ ದಿಟ್ಟಿಗೆ ಬೀಳಲಿಲ್ಲ.

ಮಳೆಯ ಮೇಲಾಟ ಕಡಿಮೆಯಾಗಿತ್ತು. ಬೀಳುತಿದ್ದ ಹನಿಗಳು ಅಲ್ಲಿಗೊಂದು ಇಲ್ಲಿಗೊಂದು ಆಗೊಂದು ಈಗೊಂದು ಬೀಳಹತ್ತಿದವು. ಗುಡುಗುತ್ತಿದ್ದ ಮೋಡ ಹಾಸಿಗೆಯು ಹಸಿಮುದ್ದನ್ನೊ ಹುಸಿಮುದ್ದನ್ನೋ ಹಾರಿಸುತ್ತಿತ್ತು. ರಜತ ಪರದೆಯಿಂದ ಚಂದ್ರ ಆಗೊಮ್ಮೆ ಈಗೊಮ್ಮೆ ಇಣಿಕಹತ್ತಿದನು.

ಎರಡು ಮೈಲು ನಡೆದ ಬಾಬೂನಿಗೆ ಬೇಜಾರವಾಯಿತು. ಅವನಿಗೆ ಹೊತ್ತಭಾರದಿಂದ ಬೇಜಾರವಾಗಲಿಲ್ಲ. ಮಳೆನಿಂತರೂ ಬಿರ್ರನೇ ಬೀಸಿ ಮೈ ಕೈ ನಡುಗಿಸುವ, ಗಾಳಿಗೂ ಅವನು ಬೇದರಲಿಲ್ಲ. ಶರೀರ ಮೈಗೆ ಮೆತ್ತಿದ್ದರೂ ಅದಕ್ಕಾದ ನೋವು ಘಾಯವನ್ನು ನಿರೀಕ್ಷಿಸಲಿಕ್ಕಾದರೂ ಒಂದು ಕುರುಡು ದೀವಿಗೆ ಕೂಡ ತನ್ನ ಹತ್ತರ ಇಲ್ಲವಲ್ಲ ಎಂದು ತಳಮಳ ಬಡುತ್ತಿದ್ದನು. ಒಂದೊಂದು ಸಲ ಅವಳನ್ನು ಇಳುಹಿ ಮೈತುಂಬ ಕೈಯಾಡಿಸಿ ನೋಡಲಾ ಎಂದೂ ಅನ್ನಿಸಿತು. ಆದರೆ ನೀರು, ನೆತ್ತರ ಹೇಗೆ ಗುರುತಿಸಬೇಕು ಅಂಗೈ ! ಅವಳನ್ನು ಎತ್ತಿ ಹೆಜ್ಜೆಹಾಕಿದನು.

---

— ಬಾಸಿಂಗಬಲ

“ ನೀಮಡಿ! ” ಬೈಲಬಂಗಾರದಂತೆ ದನಿ ಕೇಳಿತು.

ಎದರಿಗೇ ಒಂದು ಗುಡಿಸಲು. ಹುಲ್ಲಿನ ಸಂದಿನೊಳಗಿಂದ ಮಿಣುಕು ಬೆಳಕು ಹೊರಗೂಮ್ಮೆ ಕಂಡು ಕಾಣದಾಗುತ್ತಿತ್ತು. ಗುಡಿಸಲಿನೊಳಗಿಂದ ಒಬ್ಬ ಹೆಂಗಸು ಹೊರಬಿದ್ದು ಎದುರಿನ ಜೋಪಡಿಗೆ ಹೋದಳು. ಹೈರಾಣಾದ ಬಾಬೂ ಗುಡಿಸಲಿನ ಹತ್ತಿರ ಹೋದನು. ಗುಡಿಸಲು ತೀರ ಚಿಕ್ಕದಿದ್ದರೂ ಒಳಗೆ ಯಾರೂ ಇರಲಿಲ್ಲ ಒಂದು ಮೂಲೆಯಲ್ಲಿ ಒಲೆಯು ಉರಿಯುತ್ತಿತ್ತು. ಬಾಬೂ ತನ್ನ ಭಾರವನ್ನು ಎತ್ತಿಕೊಂಡು ಒಳಗೆ ಹೋದನು.

ಒಳಗೆ ನೆಲದಮೇಲೆ ಒಂದು ಸಿಂದೆಯ ಚಾಪಿಯನ್ನು ಹಾಸಿದ್ದರು. ಆದರ ಮೇಲೆ ಯಾಯಾನನ್ನು ಬಾಬೂ ಮಲಗಿಸಿದನು. ಅವಳ ತಪ್ಪಡಿಯಾದ ಸೀರೆಯನ್ನು ಹಿಂಡಿ ತೆಗೆದನು. ತನ್ನ ಚೀಲದಲ್ಲಿಯ ಟಾವೆಲನ್ನು ಹೊರಗೆ ತೆಗೆದು ಅವಳ ಮುಖ ಕೈಕಾಲುಗಳನ್ನು ತಿಕ್ಕಿತಿಕ್ಕಿ ಒರಿಸಿದನು. ಅಡ್ಡಗೋಡೆಯ ಮೇಲಿದ್ದ ಗುಬ್ಬಿಯ ಚಿಮಣಿಯನ್ನು ತಕ್ಕೊಂಡು ವ್ಯೈತುಂಬ ನಿರೀಕ್ಷಿಸಿದನು. ಹಣೆಗೆ ಒಂದು ಗುಬುಟೆ ಎದ್ದಿತ್ತು. ಎರಡೂ ಮೊಳಕಾಲುಗಳಿಗೆ ತರೆದು ರಕ್ತಬಂದು ಮುಂಜುಗಟ್ಟಿತ್ತು. ಇದರ ಹೊರತು ವಿಶೇಷ ಘಾಯವಾಗಿದ್ದಿಲ್ಲ. ಬಾಬೂ ಮೊಳಕಾಲುಗಳನ್ನು ಒರಿಸಿ ತೆಗೆದನು. ಅವಳ ಪಾದ ಮತ್ತು ಅಂಗೈಗಳಿಗೆ ಬೂದಿ ಹಚ್ಚಿ ತಿಕ್ಕಿದನು. ಒಂದು ತಗಡಿನಲ್ಲಿ ಒಲೆಯ ಬೆಂಕಿಯನ್ನು ಹಾಕಿ ಅವಳ ತಲೆಯ ಹತ್ತಿರ ಇಟ್ಟು ಶಾಖ ಕೊಟ್ಟನು.

ಈ ಉಷ್ಣೋಪಚಾರಗಳಿಂದ ಯಾಯಾನಿಗೆ ತುಸು ಎಚ್ಚರವಾಯಿತು. ಅವಳು ಮೆಲ್ಲನೆ ಕಣ್ಣು ತೆರೆದಳು.

“ ಯಾಯಾ. ” ಬಾಬೂ ಅಂದನು.

ಯಾಯಾನ ಮೋರೆಯಮೇಲೆ ಮುಗುಳು ಅರಳಿತು.

“ ನಾನು ಎಲ್ಲಿ ಆದೀನಿ? ” ಯಾಯಾ ಅಂದಳು.

“ ಹಿಂದುಗಡೆ ಹೇಳುತ್ತೇನೆ. ಈಗ ಅರಿವೆ ಬದಲಿಸು. ” ಎಂದು ಬಾಬೂ ತನ್ನ ಚೀಲದಲ್ಲಿಯ ಒಂದು ದೋತರವನ್ನು ಅವಳಿಗೆ ಕೊಟ್ಟನು.

" ನೀವು? "

" ನನಗೆ ಬೇರೆ ಇದೆ. " ಎಂದು ಬಾಬೂ ಅಂಗಿಯನ್ನೂ ಧೋತರ ವನ್ನೂ ಬದಲಿಸಿದನು.

" ನೀನು ಬದಲಿಸು. " ಎಂದು ಅವನು ಹೊರಗೆ ಹೋದನು.

" ನಾವು ಇಲ್ಲಿ ಹ್ಯಾಗ ಬಂದಿವಿ? " ಒಳಗಿನಿಂದ ಪ್ರಶ್ನೆ ಬಂತು.

" ಎವ್ಮೆಯನ್ನು ಹೊತ್ತು ತರಬೇಕಾಯಿತು. " ಬಾಬೂ ನಗೆಯಾಡಿದನು.

" ನನ್ನ ನಶೀಬ ಖೆಲೂ. "

" ಯಾಕ? "

" ಮಾದರು ಸತ್ತ ನಾಯಿ ಕಾಲ ಹಿಡದು ಎಳದಂಗ ಎಳಕೋತ ಬರಲಿಲ್ಲ. "

" ಯಾಯಾ? "

" ಯಾಕರಿ? "

" ನಾ ಹಾಗ ಮಾಡಬಹುದು? "

" ಛೀಛೀ. ಧಣೇರ. ನಿಮ್ಮಂಥ ಸಾಚಾ ಮನಸ್ಯಾರು ಏಳೇಳ ಜನಮಕ್ಕ ಗಂಟಬೀಳಾಣಿಲ್ಲಾ. "

" ಯಾಯಾ? "

" ಯಾಕರಿ? "

" ಮಾತಿನೊಳಗ ಉರಪು ಕಾಣತದ. "

" ಎದಿಯೊಳಗ ಉರಿ ನೀವ ಹಚ್ಚೀದೀರಿ. "

" ಯಾಯಾ ? "

" ಯಾಕರಿ ? "

" ಅಲ್ಲಾ, ಖಿಲಾರಿ ಬಂಡೀಯೊಳಗಿಂದ ಇಳಿದು ನೀರಿನ ನೆವದಿಂದ ಮಾತನಾಡಿಸೋ ನಿನ್ನ ಧೈರ್ಯಕ್ಕ ನನ್ನ ಉರೀನೇ ಕಾರಣ ಏನು? "

" ಧಣೇರ? "

" ಯಾಕ? "

—ಬಾಸಿಂಗಬಲ

" ನನ್ನ ಒಂದ ಸರಳ ಸವಾಲಿಗೆ ಒಂದ ಸರಳ ಜವಾಬ ಕೊಡ ತೀರಾ? "

" ಏನು ?"

" ತೋಟಾ ಕಾಯೂಕ ನನ್ನಂಥ ಚೆಲುವಿ ಯಾಕ ಬೇಕಾಗಿತ್ತರಿ."

" ಇದಕ್ಕ ಉತ್ತರಾ ನಾನ ಹೇಳಬೇಕೇನು ? "

" ಬಂದರ ಹೇಳಿರಿ. "

" ನನ್ನ ಉತ್ತರಾ ನೀನೇ ಹೇಳು. "

" ನನ್ನ ಮೋತೀ ನೋಡಿ ನಿಮಗ ಸುಖಾ ಆಗತಿತ್ತು. ನನ್ನ ಜಾತೀ ನೋಡಿ ಮರಗತಿದ್ದರಿ. "

" ಹೌದು. ಹೀಗ ಆಗತಿದ್ದದ್ದು ಖರೆ. "

" ಬೆಳಗಾವಿಗೆ ಯಾವಾಗ ಹೊರಡತೀರಿ "

" ನೀ ತಯಾರಾದ ಕೂಡಲೇ. "

" ನನ್ನೂ ಕರದೊಯ್ಯುತೀರಾ ? "

" ಯಾಯಾ ಇಷ್ಟೊತ್ತನಕಾ ಬರತೀನೆ ಅಂತ ಚಾಲವರೀತಿದ್ದಿ. ಈಗ ಗಡಕ್ಕನ ಉರಳತೀಯಲ್ಲಾ. "

" ಸಂಸಾರ ಹೂಡಿ ನಾ ಸತ್ಯವ್ಯಾಲ, ಅಳುವ ಒಂದೆರಡು ಮಕ್ಕಳ ಆದರೂ ಹಡೀತೀನಿ. "

ನೀಮಡಿ ಕೆಲಸ ತೀರಿಸಿಕೊಂಡು ತನ್ನ ಮನೆಗೆ ತಿರುಗಿದಳು. ಮನೆಯ ಬಾಗಿಲಿಗೆ ಗಂಡಸು ನಿಂತಿದ್ದ. ತನ್ನ ಗಂಡನೆಂದೇ ತಿಳಿದು, " ದೀಪಲ್ಯಾ, ಕಿಲೆ ಉಸೀರಾ ಆಲ್ಯಾಸಿ..... " ಎಂದು ಅಂದಳು.

ಬಾಬೂ ಉತ್ತರಿಸಲಿಲ್ಲ. ಉತ್ತರ ಬಾರದ್ದಕ್ಕೆ ನೀಮಡಿ ಚಮಕಿತಳಾದಳು. ಒಂದೆರಡು ಹೆಜ್ಜೆ ಮುಂದುವರಿದಳು. ಗಂಡನ ಗುರತುಸಿಕ್ಕಲಿಲ್ಲ. ಗಂಡಸಿನಿಂದ ಉತ್ತರವೂ ಬರಲಿಲ್ಲ. ಅವಳು ಥಟಕ್ಕನೆ ಹಿಂದೆ ಜಿಗಿದು " ಕೋಯಣ ಕೋಯಲಾ ! " ಎಂದು ಚೀರುತ್ತ ಓಡಿಹೋದಳು.

ಒಳಗೆ ಯಾಯಾ ನಗುತ್ತಿದ್ದಳು. ಬಾಬೂನಿಗೆ ಅರ್ಥವಾಗಲಿಲ್ಲ. ನೀಮಡಿಯ ಚೀರುವಿಕೆಯಿಂದ ಹೊಸ ಸಂಕಟ ಯಾವುದು ಉದ್ಭವಿಸು

ವದೋ ಎಂದು ಅವನು ಚಿಂತಾತುರನಾಗಿದ್ದ. ಯಾಯಾ ನಗುತ್ತಿದ್ದುದನ್ನು ನೋಡಿ ಅವನಿಗೆ ಆಶ್ಚರ್ಯವಾಯಿತು.

" ಯಾಕ ಯಾಯಾ ನಗತೀ? "

" ಒಳಗ ಬರ್‍ರಿ. ಹೇಳತೀನಿ. "

" ಸೀರಿ ಉಟ್ಟೆ ಏನು ? "

" ಸೀರೆ ಉಡಲಿಲ್ಲ. ದೋತರ ಉಟ್ಟೆ. "

ಬಾಬೂ ತನ್ನ ತಪ್ಪಿಗೇ ತಾನು ನಾಚಿ ಒಳಗೆ ಬಂದನು. ಯಾಯಾ ದೋತರ ಉಟ್ಟು ಗೋಡೆಗೆ ಆತು ಕುಳಿತಿದ್ದಳು. ಉಟ್ಟ ಸೀರೆಯನ್ನು ಹಿಂಡಿ ತೂಗು ಹಾಕಿದ್ದಳು. ತೊಯ್ದ ಕೂದಲುಗಳನ್ನು ಹಿಂಡಿ ಆರಲು ಹೆಗಲಿಗೆ ತೂರಿದ್ದಳು. ಕುಳಿರಿನ ಕಾಟಕ್ಕೆ ರಕ್ತ ಮುಖಕ್ಕೆ ಚಿಮ್ಮುತ್ತಿದ್ದಿತು. ಯಾಯಾನ ಈ ಹೊಸ ರೂಪ ನೋಡಿ ಬಾಬೂ ಬೆರಳು ಕಚ್ಚಿದನು.

" ನಾವು ಎಲ್ಲಿ ಅದೀವಿ ತಿಳೀತೇನ ನಿಮಗ? " ಯಾಯಾ ಕೇಳಿದಳು.

" ಇಲ್ಲಾ. "

" ತಾಂಡೇದಾಗ. "

" ಅಹುದು ? "

" ಹೂಂ. ಆ ಗಗ್ಗರಿ ನೋಡರಿ. "

ಬಾಬೂ ಚಪ್ಪರಕ್ಕೆ ಹೊಂದಿದ ಒಂದು ಕೋಲಿನ ಮೇಲೆ ಒಂದು ಗಗ್ಗರಿ ಒಣಗಲು ಹಾಕಿತ್ತು. ಅದರಿಂದಲೂ ನೀರು ತಟಕಿಕ್ಕುತ್ತಿತ್ತು. ನೀಮಡಿ ಕೂಡ ತೋಯಿಸಿಕೊಂಡೇ ಮನೆಗೆ ಬಂದಿರಬೇಕೆಂದು ಅವರು ತಿಳಿದರು.

" ಯಾಯಾ ಈ ಹಿಂದುಸ್ತಾನ ಬಿಟ್ಟು ಹೋಗೋಣೇನು ? "

" ಎಲ್ಲಿಗೆ ? "

" ಅಂದಮಾನಕ್ಕ. "

" ಕರಿ ನೀರಿನ ಹೊಲಕ್ಕ? '

" ಹೂಂ "

---

—ಬಾಸಿಂಗಬಲ

“ ಹೌದು ಅದು ಬೇಸಿ. ಅಲ್ಲಾ ನೀವು ಅಲ್ಲಿಗೆ ಹೋದ್ರ ನಿಮ್ಮ ತಾಯಿ ಸತ್ತಾಂಗ, ನಾ ಅಲ್ಲಿಗೆ ಹೋದರ ಗೌಡ ಸತ್ತಂಗ, ಅಂದ ಮ್ಯಾಲ ಇಬ್ಬರೂ ಕೊಲೆಗಡಕರು ಅಲ್ಲಿ ಹೋಗಾಕ ಹರಕತ್ತ ಏನೈತಿ ? ”

ತನ್ನ ಪ್ರಶ್ನೆಗೆ ಸರಿಯಾದ ಉತ್ತರ ಸಿಕ್ಕಿದ್ದರಿಂದ ಬಾಬೂನ ಬಾಯಿಗೆ ಬೀಗ ಬಿದ್ದಿತು. ಅವನು ಮುಂದೆ ಮಾತನಾಡಲಿಲ್ಲ.

“ ಧಣೀರ ನಾನು ಹೊರಟದ್ದೂ ಇಲ್ಲೇ, ನೀವು ಬಂದದ್ದೂ ಇಲ್ಲೇ. ಎಂಥಾ ನಶೀಬ. ”

“ ತಾಂಡೇಕ ಬರಬೇಕಂತ ಮಾಡಿದ್ದಿಯಾ ? ”

“ ಹೂಂ ”

“ ಯಾಯಾ ಈಗ ನೀಮಡಿ ಬರಬಹುದು. ಅವಳು ಬರೋದರೊಳಗ ನಾವು ಹೊರಡೋಣಲ್ಲಾ. ”

“ ನೀಮಡಿ ? ”

“ ಅಹುದು. ಈ ಜೋಪಡಿ ಒಡತಿ. ”

“ ಮತ್ತಿಷ್ಟು ಛೆಲೂ ಆಯಿತು. ”

“ ನಿನಗೆ ಅವಳ ಗುರ್ತು ಅದ ? ”

“ ತಾಂಡೇದ ಜನ ಎಲ್ಲಾ ಲೋಕಾಪುರದಾಗ ದುಡೀತೈತಿ. ಯಾಪಾರ ಮಾಡತೈತಿ. ಸಂತೀ ಮಾಡತೈತಿ. ನೀಮಡಿ ವಾರಾ ನಮ್ಮ ಮನಿಗೆ ಕಟಗೀ ಹೊರೀ ಹಾಕತಾಳು....ಈಗೆಲ್ಲಿ ಹೋಗವರು ? ”

“ ದಾರಿ ಎಲ್ಲೆ ಸಿಗತದ ಅಲ್ಲೆ...ದೂರ....ದೂರ. ”

“ ಈ ರಾತ್ರಿ ಇಲ್ಲೇ ಕಳಿಯೋಣ. ”

“ ಈ ಝೋಪಡ್ಯಾಗ. ”

“ ಅಹುದು. ಧಣೀರ. ನನ್ನ ಮಾತ ಕೇಳರಿ. ಈ ಆಸೂಮಂದಿ ನನಗ ಗೊತ್ತರಿ. ಅವರು ಬೆನ್ನಟ್ಟಿ ನಮ್ಮನ್ನ ಹಿಡದು ಗೌಡಗ ಒಪ್ಪಿಸಿದರ ಏನ್ಮಾಡತೀರಿ ? ”

ಬಾಬೂ ನಡಗಿದನು.

" ಹೌದು ಯಾಯಾ ಏನು ಮಾಡಬೇಕು ? "

" ನಾ ಹೇಳಿದಾಂಗ ಮಾಡತೀರಿ ? "

ಬಾಬೂ ನಿರ್ವಾಹವಿಲ್ಲದೆ ಒಪ್ಪಿದನು.

" ಧಣೇರ ನೀವಮಡಿ ಪೋಲೀಸ ಅಂತ ಒದರಿದಳು. ಪೋಲೀಸರಿಗೆ ಈ ಜನ ಹೆದರಿ ಸಾಯತೈತಿ. "

" ಯಾಕ ? "

" ಧಣೇರ ಪೋಲೀಸರಿಗೆ ಯಾರ ಅಂಜಾಣಿಲ್ಲಾ. ಈಗ ಪೋಲೀಸರು ಬಂದರ ಸುಮ್ಮನಿರತೀರಿ ? "

" ನಾಯಾಕ ಅಂಜಬೇಕು ? "

" ಐ ಶಿವನ. ಎಡ್ಡನೇ ಹೆಂಗಸನ್ನ ಓಡಿಸಿಗೊಂಡು ಹೋದರ ಪೋಲೀಸಿನವ ಸುಮಾಕ ಇರತಾನು ? "

" ನೀನ ಓಡಿ ಬಂದಿ ಅಲ್ಲಾ ! "

" ಹಾಂಗ ನೀವ ಅಂತೀರಿ. ನೀವು ಅಂದದ್ದು ಅವ ನೆಂಬ ಬೇಕಲ್ಲ."

" ಇರಲಿ. ಇವರು ಯಾಕ ಅಂಜಬೇಕು ? "

" ತಾಂಡೇ ಅಂದರ ಭಟ್ಟಿ ಸೆರಿ ಜಾಗಾ. "

" ಹೂಂ. "

" ಅದಕ್ಕ ಪೋಲೀಸರು ಬಂದರೂ ಅಂತ ಹೇಳಾಕ ಹೋಗೀದಾಳು ನೀಮಡಿ. ತಾಂಡೇದ ನಾಯ್ಕ, ನಾಲ್ಕಾರು ಮಂದಿ ಗಟ್ಟಿಳ್ಳವರು ಬರತಾರು. ಅವರಿಗೆ ಏನಂತ ಹೇಳತೀರಿ?"

" ಏನಂತ ಹೇಳಲಿ ? "

" ನಾ ಹೇಳಿಧಂಗ ಹೇಳತೀರಿ ? "

" ಹೂಂ. "

" ನಾನು ನನ್ನ ಹೆಂಡತಿ...."

" ನನ್ನ ಹೆಂಡತಿ ? "

" ಹೂಂ...ನಾನು. "

" ಯಾಯಾ ಶಕ್ಯಯಿಲ್ಲ. "

---

—ಬಾಸಿಂಗಬಲ

" ಧಣೇರ ಈಟ್ಟ ಅಪ್ಪರಾತ್ರ್ಯಾಗ ಹೇಣತೀ ಹೊರತು ಯಾವ ಹೆಂಗಸು ಹೊರಗ ಬಂದಾಳ ಹೇಳರಿ. ಬ್ಯಾರೆ ಹೇಳಿದರ ಜನ ಏನಂತ ನೆಂಬೀತು ? "

" ಅಕ್ಕ ಅನ್ನು, ತಂಗಿ ಅನ್ನು. "

" ಹಾಂಗ ನಿಮ್ಮ ಬಾಯಿಗೆ ಬಂದರ ಅನ್ನಿರಿ. "

" ಒಳ್ಳೇ ಇರುಕಿನಲ್ಲಿ ಹಿಡಿದೆಯಲ್ಲ ಯಾಯಾ. "

" ಹಾಂಗಾರ ಬಿಡ್ರಿ. ಶಿವಾ ಏನ ಬುದ್ಧಿ ಕೊಡತಾನೋ ಹಾಂಗ ನುಡೀರಿ. "

" ಮುಂದ ಹೇಳಿಯಾದರೂ ಹೇಳು. "

" ಮುಂದ ಕೆಲಸ ಸರಳ ಐತಿ. ಅನಗವಾಡಿಗೆ ಹೊರಟಿದ್ದಿವಿ, ಗಾಡಿ ತೆಪ್ಪಿತು. ಹಾಂಗ ನಡದು, ಕಲಾದಗಿಯಾಗ ಬೀಗರ ಮನಿಗೆ ಹೋದರಾತು ಅಂತ ಹೊಂಟಿವಿ. ಮಳಿ ಜಡೀತು. ತೋಸಗೋತ ಬಸಗೋತ ಬಂದಿವಿ. ಅಂತ ಹೇಳಿ. ನಾಳಿ ಬೆಳಗ್ಗಿ ನಾಯ್ಕದ ಒಂದ ಚಕ್ಕಡಿ ಕಟ್ಟ ಅಂತ ಹೇಳ್ರಿ."

" ಅವನ ಹತ್ತರ ಚಕ್ಕಡಿ ಅದ ? "

" ಐತಿ. ರೂಪಾಯಿ ಅದಾವೋ ಇಲ್ಲೋ ? "

" ಇರಬೇಕು. "

" ಕೈಯಾಗ ಹತ್ತ ರೂಪಾಯಿ ಲೋಟ ಒಂದ ಇಡ್ರಿ. ಲೋಟಂದರ ಈ ಜನಕ್ಕ ಬಲ್ಸೆವಿ. "

" ಮುಂದ ? "

" ಇಲ್ಲಿಂದ ಅನಗವಾಡಿ, ಇಜಾಪುರ, ಶೇಡಬಾಳ. ಶೇಡಬಾಳದಿಂಡ ಬೇಕಾದರ ಪುಣೆ, ಬೇಕಾದರ ಬೆಳಗಾವಿ "

ಹೊರಗೆ ಸಪ್ಪಳವಾಯಿತು. ನಾಯಕ ಅವನ ಸಂಗಡಿಗರು ನೀವುಡಿ, ಅವಳ ಗಂಡ ಎಲ್ಲರೂ ಬಂದಿದ್ದರು. ಬಾಬೂ ಹೊರಗೆ ಬಂದನು. ಅವರು ಯುದ್ಧದ ತಯಾರಿಯಿಂದಲೇ ಬಂದಿದ್ದರು. ಬಾಬೂ ಹೊರಗೆ ಬಂದುದನ್ನು ನೋಡಿ ನಾಯಕನು ಮುಂದೆ ಬಂದನು.

" ನೀವು ಯಾರು ? " ಎಂದು ಕೇಳಿದನು.

" ನಾನು ಅನಗವಾಡಿಯುವ ಊರಿಗೆ ಹೋಗಬೇಕೆಂದು ಬಂದೆವು. ಗಾಡಿ ತಪ್ಪಿತು. ಬೆಳದಿಂಗಳು ಇತ್ತು. ನಡೆದಾದರೂ ಕಲಾದಗಿಯ ನಮ್ಮ ಸಂಬಂಧಿಕರ ಮನೆಗೆ ಹೋಗೋಣವೆಂದು ಹೊರಟೆವು. ಮಳೆ ಹೊಡೆಯಿತು. ದಾರಿತಪ್ಪಿ ಇಲ್ಲಿಗೆ ಬರಬೇಕಾಯಿತು. "

" ಹೂಂ. ಮತ್ತ ಯಾರ ಇದ್ದಾರ ನಿಮ್ಮ ಕೂಟ. "

" ಒಬ್ಬ ಹೆಂಗಸು ? "

" ಹೆಂಗಸು ? "

" ಹೂಂ. ನನ್ನ ಹೆಂಡತಿ. ನಮಗ ಈ ರಾತ್ರಿ ವಸತಿಗೆ ಅಷ್ಟು ಜಾಗಾ ಕೊಟ್ಟರ ವಸತೀ ಮಾಡಿ ಬೆಳಗ್ಗೆ ಹೊರಡತೀವಿ. "

" ಹೂಂ. "

" ನಾಳೆ ಬೆಳಗ್ಗೆ ನಮಗ ಒಂದು ಚಕ್ಕಡಿ ಕಟ್ಟಿಸಿದರ ಬೇಕು."

" ನಮ್ಮ ಹತ್ತರ ಚಕಡಿ ಇಲ್ಲ. "

" ನಿಮ್ಮದು ಚಕ್ಕಡಿ ಅದ ಅಂತ ಕೇಳೀನಿ. ಇಕಾ ಈ ಹತ್ತ ರೂಪಾಯಿ ನೋಟು. " ಎಂದು ಬಾಬೂ ಅವನ ಕೈಯಲ್ಲಿ ಹತ್ತು ರೂಪಾಯಿಯ ನೋಟು ಇಟ್ಟನು.

ಕೈಯಲ್ಲಿ ನೋಟು ಹಿಡಿದ ನಾಯಕ ಸಂತೋಷಗೊಂಡನು. ಅವನು ನೀಮಡಿಗೆ ಅಂದನು.

" ನೀಮಡಿ. ಅವರಿಗೇನು ಬೇಕು ನೋಡು. ದೀಪಲ್ಯಾ ಬೆಳಗ್ಗೆ ನಮ್ಮ ಗಾಡಿ ಹೊಡಿ ಅವರ್ನ ಕಳಿಸಿ ಬಾ. " ಎಂದನು.

ನಾಯಕ ಅವನ ಸಂಗಡಿಗರು ಹೋದರು. ದೀಪಲ್ಯಾ ಮತ್ತು ನೀಮಡಿ ಮನೆಯ ಹತ್ತಿರ ಬಂದರು. ನೀಮಡಿ ಅವನಿಗೆ ಒಳಗಿನ ಒಂದು ಗೊಂಗಡಿ ತಂದು ಕೊಟ್ಟಳು.

" ಚವಲಿಯ ಮನೆಗೆ ಬಾ " ದೀಪಲ್ಯಾ ಹೇಳಿದನು.

ನೀಮಡಿ ಮತ್ತೆ ಒಳಗೆ ಹೋದಳು. ಯಾಯಾನ ಕೂಡ ಬಹಳ ಹೊತ್ತು ಮಾತನಾಡಿದಳು. ಬಹಳ ಹೊತ್ತಿನ ಮೇಲೆ ಹೊರಗೆ ಬಂದಳು.

---

— ಬಾಸಿಂಗಬಲ

" ಬಾಯೀಯವರು ಕರೀತಾರ ಒಳಗ " ಅಂದಳು.

" ಯಾರನ್ನ ? "

" ನಿಮ್ಮನ್ನ. "

" ಯಾಕ ? "

" ಗೊಂತಿಲ್ಲ. "

ಬಾಬೂ ಒಳಗೆ ಹೋದನು. ಹೊರಗೆ ನಿಂತ ನೀಮಡಿ ಹೊರಗಿನಿಂದ ಬಾಗಿಲುಕೊಂಡಿ ಹಾಕಿದಳು. ಬಾಬೂ ಚಕಿತನಾಗಿ ಬಾಗಿಲಿಗೆ ಬಂದು ಜಗ್ಗಿ ದನು. ಅದು ಹೊರಗಿನಿಂದ ಭದ್ರವಾಗಿ ಇಕ್ಕಿತ್ತು.

" ಯಾಯಾ ಇದೇನು ? " ಬಾಬೂ ಅಂದ.

" ಹಾಸಿಗಿ ಹಾಸೀನಿ. ಮಲಗಿರಿ. " ಎಂದಳು ಯಾಯಾ.

---

## ೧೩. ಸಂಪತ್ತು ಶುಕ್ರವಾರ. * * *

ಚೈತ್ರವು ಕಾಲಿಟ್ಟಿತ್ತು. ಯುಗಾದಿಗೆ ಚಿಗುರಿನಿಂತ ಬೇವು ಕಾಯಿ ಗಟ್ಟುತ್ತಲಿತ್ತು. ಮಾವಿನ ತೋಪಿನಲ್ಲಿ ಹಸಿಗಾಯ್ಗಳು ಸಕ್ಕರೆಗೆ ಹುಳಿ ಯನ್ನು ಶೇಖರಿಸುತ್ತಿದ್ದವು. ಎರಡು ವರುಷಕ್ಕೆ ಹೂಬಿಡುವ ಮಾವು ಎಳೆ ಹಸಿರ ತಳಿರು ಹೊಚ್ಚಿಕೊಂಡಿತ್ತು. ಫಲಿತು ನಿಂತ ಹುಣಸೆ ಬರುವ ದಿನಗಳನ್ನು ನೆನೆಯುತ್ತಿದ್ದಿತು. ಹಲಸು ಮಿಡಿಗಾಯ್ಗಳನ್ನು ಹೊತ್ತು ಕೊಂಡಿತ್ತು. ಹುಳಿಬಿದ್ದ ಕವಳಿ ಒಂದು ಮಳೆಯ ಸೆಳಕನ್ನು ನಿರೀಕ್ಷಿಸುತ್ತಿ ದ್ದಿತು.

ಈ ದಿನ ಗೋದಾವರಿಯ ಮನೆಯಲ್ಲಿ ಸಮಾರಂಭ. ಹಿರಿಯ ಸೊಸೆ ಉಷೆ ಗೌರಿಯನ್ನು ಸಿಂಗರಿಸುತ್ತಿದ್ದಳು. ಮನೆಯೆಲ್ಲವೂ ಅಚ್ಚು ಕಟ್ಟಾಗಿತ್ತು. ಬಾಗಿಲಕ್ಕೆ ತೋರಣ, ಮಾಡಕ್ಕೆ ಕಮಾನು ಸಮಾರಂಭ ದಲ್ಲಿ ಮಹತ್ವದ ಶುಭಜಿನ್ಹಗಳಾಗಿ ಓಲಾಡುತ್ತಿದ್ದವು. ಕಮಲೆಯೂ ಊಟಕ್ಕೆ ಬರುವವಳಿದ್ದಳು ಗೋದಾವರಿಯು ಬೆಳಗಿನಲ್ಲಿಯೇ ಎದ್ದು ಊಟದ ಸಿದ್ಧತೆ ನಡಿಸಿದ್ದಳು. ಅವಳ ಆನಂದಕ್ಕೆ ಇಂದು ಪಾರವೇ ಇಲ್ಲ. ಆದರೂ ಅವಳ ಎದೆಗುಂಡಿಯಲ್ಲಿ ಅದಾವುದೋ ಒಂದು ನೋವು ಅಂದಿನ ಸಮಾರಂಭದ ಅಪೂರ್ಣತೆಗಾಗಿ ಚುಚ್ಚುತ್ತಿತ್ತು.

ಬೆಳಗಿನಿಂದಲೂ ಅವಳ ಎಡಗಣ್ಣು ಹಾರುತ್ತಿತ್ತು. ಮೊದ ಲಿನ ಹಾರಿಕೆಗೆ ಅವಳು ವಿಶೇಷ ಮಹತ್ವ ಕೊಡಲಿಲ್ಲ. ಆದರೆ ಕ್ರಮ ಬದ್ಧವಾಗಿ ಅದು ಹಾರುತ್ತಿರುವಾಗ ಅದರ ಕಡೆಗೆ ಲಕ್ಷ್ಯಪೂರೈಸಲೇ ಬೇಕಾ ಯಿತು. ಅದಾವುದೋ ಒಂದು ಅನಿರೀಕ್ಷಿತ ಶುಭಪ್ರಸಂಗ ನಿರೀಕ್ಷಿಸಬಹು ದೆಂದು ಅವಳಿಗೆ ನಿಚ್ಚಳವಾಯಿತು. ಆದರೆ ಯಾವುದು ?

ಬಾಬೂ ಆದಿನ ಬೇನೆಬಿದ್ದಾಗ ಬಂದ ಪತ್ರವನ್ನು ಗೋದಾವರಿ ತೆಗೆದಿಟ್ಟಳು. ಬಾಬೂ ಯಾಯಾರ ಸಮ್ಮೇಲನವನ್ನು ತಪ್ಪಿಸಬೇಕೆಂದು ಅವಳು ಯತ್ನಿಸಿದಳು. ಆದರೆ ತಾರಿನ ಕರೆಯು ಬಂದಾಗ ಅವಳ ಆಶೆ ಮಣ್ಣುಗೂಡಿತು. ಬಂದ ವಿಧಿಯನ್ನು ಎದುರಿಸಬೇಕೆಂದು ಅವಳು ನಿರ್ಧರಿ ಸಿದಳು.

ಉಷೆಯು ಗೌರಿಗೆ ಸಿಂಗರಿಸುತ್ತಿದ್ದಳು. ಕಮಲೆ ಅವಳಿಗೆ ನೆರವಾಗು ತ್ತಿದ್ದಳು. ಗೌರಿಗೆ ಸಸಿ ಹಾಕುವದು, ಗೌರಿಯ ಹೊಟ್ಟೆಯಲ್ಲಿ ಗೋದಿ, ಅಡಿಕೆ ತುಂಬುವದು, ವ್ಯವಸ್ಥಿತವಾಗಿ ಮಾಡುತ್ತಿದ್ದಳು. ಗೌರಿಗೆ ಕರಿಕೆ, ಐದು ಪತ್ರಿ, ದಂಡೆ, ಹೂವು, ಕುಪ್ಪುಸ, ಸೀರೆಗಳನ್ನು ಸಿದ್ಧಪಡಿಸುತ್ತಿ ದ್ದಳು.

ಎಂದಿನಕಿಂತಲೂ ಇಂದು ಧೀರ ಬೇಗನೇ ಮನೆಗೆ ಬಂದನು. ಹಬ್ಬದ ದಿನಗಳಲ್ಲಿ ಜೋಳವನ್ನಾದರೂ ಯಾರು ಕೊಳ್ಳಬೇಕು ? ಮನೆಯಲ್ಲಿ ತನ್ನ ಹೆಂಡತಿ ಮತ್ತು ಕಮಲೆ ಗೌರಿಗೆ ಸಿಂಗಾರಮಾಡುತ್ತಿದ್ದರು. ತಾನು

ನೆರವಾಗದಿದ್ದರೂ ಅವರು ಮಾಡುವ ತಪ್ಪುತಡೆಗಳನ್ನು ತಿದ್ದುವದರಲ್ಲಿ ಮಗ್ನನಾದನು.

“ ಈದಿನ ಬಾಬೂ ಇದ್ದಿದ್ದರೆ ಮನೆ ತುಂಬುತ್ತಿತ್ತು. ನೋಡು..... ಅವ್ವಾ. ” ಧೀರ ಅಂದನು.

“ ಬೆಳಗಿನಿಂದಲೂ ನನ್ನ ಎಡಗಣ್ಣು ಹಾರಹತ್ತಿದೆ. ಅವನು ಇಂದು ಬರಬಹುದೇನೋ ? ” ತಾಯಿ ಶಂಕೆ ತೆಗೆದಳು.

“ ಮೊನ್ನೆಯೇ ಹೋಗಿದ್ದಾನೆ. ಇಂದು ಹೇಗೆ ಬರಬಹುದು ? ” ಕಮಲೆ ಶಂಕೆಯ ನಿವಾರಣೆ ಮಾಡಿದಳು.

ಇಬ್ಬರೂ ಎರೆದುಕೊಂಡು ಹಸಿಕೂದಲುಗಳನ್ನು ಬೆನ್ನಿಗೆ ಒಣಗ ಹಾಕಿದ್ದರು. ಬಿಟ್ಟ ಕೂದಲು ಸಿಕ್ಕಹಾಗೆ ಬೀಳಬಾರದೆಂದು ಎಡಬಲದ ಎಸಳುಗಳನ್ನು ಹಿಂದೆ ಹೆಳಲು ಹಾಕಿದ್ದರು. ಮುಖವೆಲ್ಲವೂ ಎಣ್ಣೆ ಮಜ್ಜನ ಮಾಡಿದಂತಿತ್ತು. ಇಬ್ಬರಿಗೂ ರೇಶಿಮೆಯ ಸೀರೆಗಳು ಉದ್ದ ಕಾಣುತ್ತಿದ್ದವು.

ಉಷೆ, ಮನೆಯ ಮುತ್ತೈದೆ, ಸಾಹಿತ್ಯದ ತಾಟು ತಂದಳು. ಕಮಲೆ ಆವಳಿಗೆ ಒಂದೊಂದೇ ಸಾಹಿತ್ಯ ಕೊಡಹತ್ತಿದಳು. ಉಷೆ ಗೌರಿಯ ಪೂಜೆಗೆ ತೊಡಗಿದಳು.

ಗೌರಿಗೆ ಸೀರೆ ಕುಪ್ಪುಸ ತೊಡಿಸಿದಳು. ಕರಿಕೆ ಪತ್ರಿ ಏರಿಸಿದಳು. ಅರಿಷಿಣ ಕುಂಕುಮ ಹಚ್ಚಿದಳು. ಬಗಲಿಗೆ ಸಸಿಯನ್ನು ಇರಿಸಿದಳು. ತಾಯಿಗೆ ನೈವೇದ್ಯ ತರಲು ಹೇಳಿದಳು. ಗೋದಾವರಿ ನೈವೇದ್ಯ ತಂದಳು. ಉಷೆ ಗೌರಿಗೆ ನೈವೇದ್ಯ ತೋರಿಸಿದಳು. ಕಮಲೆ ಹೂರಣಾರತಿ ಹೊತ್ತಿಸಿ ದಳು. ಆರತಿ ಆರಬಾರದೆಂದು ಧೀರ ಬಾಗಿಲು ಇಕ್ಕಿದನು. ಇಬ್ಬರೂ ಆರತಿ ಎತ್ತಿ ಬೆಳಗಹತ್ತಿದರು. ಅಡಿಗೆ ಬಿಟ್ಟು ತಾಯಿ ಕೂಡ ಹೊರಗೆ ಬಂದಳು.

ಉಷೆ ಆರತಿಯನ್ನು ಎತ್ತಿದಳು. ಕಮಲೆ ಸರಾಗವಾಗಿ ಹಾಡಿದಳು. ಗೋದಾವರಿ ಮತ್ತು ಧೀರ ಭಕ್ತರ ತನ್ಮಯತೆಯಲ್ಲಿ ಕೇಳಿದರು. ಅಕ್ಷತೆ ಚಲ್ಲಿ ಅವರ ಮೇಲೆ ಆರತಿಯನ್ನು ಇಟ್ಟರು.

" ಧೀರನಿಗೆ ಆರತಿ ಮಾಡಿರಿ. " ಗೋದಾವರಿ ಅಂದಳು.

" ನನಗೇಕೆ ಅವ್ವಾ? " ಧೀರ ಹಿಂಜರಿದನು.

" ಇರಲಿ ಹಿಡಿ. " ಕಮಲೆ ಒತ್ತಾಯ ಮಾಡಿದಳು.

" ಈದಿನ ಸಂಪತ್ತು ಶುಕ್ರವಾರ. " ತಾಯಿ ಅಂದಳು.

ಧೀರನಿಗೆ ಆರತಿ ಬೆಳಗಿದರು. ಬಾಗಿಲು ಸಪ್ಪಳವಾಯಿತು. ಗಾಳಿಗೆ ಬಡಿದಿರುಬಹುದೆಂದು ಯಾರೂ ಆದಕ್ಕೆ ಲಕ್ಷಕೊಡಲಿಲ್ಲ. ಆದರೆ ಇಲ್ಲ. ಮತ್ತೆ ಬಾಗಿಲು ಬಡಿದ ಸಪ್ಪಳವಾಯಿತು. ಧೀರನು ಹೋಗಿ ಬಾಗಿಲು ತೆರೆದನು.

ಬಾಗಿಲಲ್ಲಿ ಬಾಬೂ ಇದ್ದನು.

" ಅವ್ವಾ ಬಾಬೂ. " ಧೀರ ಉದ್ಗಾರ ತೆಗೆದನು.

" ಒಳ್ಳೇ ಹೊತ್ತಿಗೆ ಬಂದೆ. ಕೈಕಾಲು ತೊಳೆದುಕೊಂಡು ಬಂದು ಬಿಡು. ಆರತಿ ಬೆಳಗುವರು. " ಗೋದಾವರಿ ಅಂದಳು.

" ಬಾಬೂ ತಡೆದನು. "

" ಮತ್ತೆ ಯಾರು ಹೊರಗೆ ಇದ್ದಾರೆ? " ತಾಯಿ ಕೇಳಿದಳು

" ಯಾರೂ ಇಲ್ಲ. " ತೊಡಕಿನಿಂದ ಅಂದನು.

" ಯಾಯಾ ಬಂದಳೇನು? " ಗೋದಾವರಿ ಬಾಬೂನನ್ನು ನಿರೀಕ್ಷಿಸುತ್ತ ಅಂದಳು.

" ಯಾಯಾ? "

" ಹೂಂ. ನೀಮಾನ ಮಗಳು? "

" ಅಹುದು. "

" ಕರೆ ಅವಳನ್ನೂ. "

ಬಾಬೂ ಯಾಯಾನನ್ನೂ ಒಳಗೆ ಕರೆದನು. ಯಾಯಾನ ವೇಷ ರೂಪನೋಡಿ ಎಲ್ಲರೂ ಅಚ್ಚರಿಗೊಂಡರು ಹುಸಿಕೆಂಪು ಅವಳ ಬಣ್ಣ. ಪ್ರವಾಸದ ಬೇಜಾರ ಮೋರೆಯಮೇಲೆ ಮೂಡಿದ್ದಿತು. ಹಸಿರು ಸೀರೆಯನ್ನು ಉಟ್ಟ ಅವಳ ದೇಹ ಪುಷ್ಟವಾಗಿ ಅವಯವಗಳನ್ನು ಕೊರೆದು ತೆಗೆದಂತೆ ಮನೋಹರವಾಗಿ ಕಾಣುತ್ತಿತ್ತು.

---

— ಬಾಸಿಂಗಬಲ

ಉಷಾ, ಧೀರ, ಕಮಲೆ ಚಕಿತರಾಗಿ ಯಾಯಾನನ್ನು ನಿರೀಕ್ಷಿಸುತ್ತಿದ್ದರು. ಅವಳ ಆ ಹಳ್ಳಿಯ ದಿಟ್ಟತನ, ಶಕ್ತಿ ಪ್ರದರ್ಶಿಸುವ ಅವಳ ಬಣ್ಣ, ದೇಹದ ನಿಲುವು, ಅವರನ್ನು ಮುಗ್ಧಗೊಳಿಸಿದವು. ವಿಮಲೆಯ ಸಾವಿರಪಾಲು ಶ್ರೇಷ್ಠಳಾದ ಯಾಯಾ ಅಂದು ಅವರಿಗೆ ಜಗದಂಬೆಯಾಗಿ ಕಂಡಿರಬೇಕು.

" ಬಾಬೂ ಜಳಕವಾಗಿದೆಯೇ? " ಗೋದಾವರಿ ಕೇಳಿದಳು.

" ಇಲ್ಲ. " ಬಾಬೂ ಅಂದನು.

" ಹಾಗಾದರೆ ಏಳಿರಿ. ಹಂಡೆಯಲ್ಲಿ ನೀರು ಕಾಯ್ದಿದೆ. ಎರಡೆರಡು ತಂಬಿಗೆ ಸ್ನಾನಮಾಡಿ ಊಟಕ್ಕೇಳಿರಿ. ಕಮಲಾ ಎಲೆ ಹಾಕು. " ಗೋದಾವರಿ ಅಂದಳು.

" ನಾನೂ ಒಳಗ ಮುಟ್ಟಲಿ? " ಯಾಯಾ ಎಡಚಿಡಚಾಗಿ ಕೇಳಿದಳು.

" ಹೂಂ. " ಗೋದಾವರಿ ಅಂದಳು.

ಇಬ್ಬರೂ ಸ್ನಾನಮಾಡಿದರು. ಕಮಲೆ, ಉಷೆ ಎಲೆ ಹಾಕಿ ರಂಗವಲ್ಲಿಯಿಂದ ಸಿಂಗರಿಸಿದರು. ತಂಬಿಗೆ ಥಾಲಿ ಇಟ್ಟರು. ಆರತಿಯ ಹೂರಣವನ್ನು ಹಂಚಿಹಾಕಿದರು. ಗೋದಾವರಿ ಅವರ ಸ್ನಾನ ಮುಗಿವವರೆಗೆ ಬಡಿಸಿದಳು. ಅವರಿಬ್ಬರೂ ಮಣೆಯಮೇಲೆ ಕುಳಿತರು. ಗೋದಾವರಿ ಅನ್ನ ಹಾಕಿದಳು.

" ಅವ್ವಾ ನಾನೂ ಮೇಲೆ ಇರತೀನಿ. " ಕಮಲೆ ಅಂದಳು.

" ಇರುವವರೇ ಐವರಿದ್ದೀರಿ. ಐವರಿಗೆ ಬಡಿಸಲಿಕ್ಕೆ ಇಬ್ಬರೇತಕ್ಕೆ ಬೇಕು. ಎಲ್ಲರೂ ಕೂಡಿರಿ. ನಾನು ಬಡಿಸುತ್ತೇನೆ. ನೀವು ನಿಧಾನವಾಗಿ ಉಂಡರೆ ಸರಿ. "

" ಅವ್ವಾ ಈ ದಿನ ಬಾಬೂನ ಭೂಮ ಏನು? " ಕಮಲೆ ಕಡೆಗಣ್ಣುಗಳಿಂದ ಅವರನ್ನು ನೋಡುತ್ತ ಅಂದಳು.

" ಹೂಂ. " ಗೋದಾವರಿ ಅಂದಳು.

ಯಾಯಾ ನಾಚಿದಳು.

ಬಾಬೂ ಮೂಢನಾದನು.

" ಹೊಟ್ಟೆತುಂಬ ಊಟಮಾಡಿರಿ. ಸಾವಕಾಶ ಕೂಡಿರಿ. " ಗೋದಾವರಿ ಅಂದಳು.

" ಅವ್ವಾ ನಿರುದ್ಯೋಗಿಗಳ ಕೂಡ ಪಣಬೇಡ. " ಧೀರ ನಗೆಯಾಡಿದನು. " ಹವಣು ನೋಡಿ ಬಡಿಸು. "

" ನೀವು ಉಂಡರೆ ನನ್ನ ಹೊಟ್ಟೆ ತುಂಬಿದಂತೆ ಧೀರ." ಗೋದಾವರಿ ಅಂದಳು. " ಅರಹೊಟ್ಟೆ ಉಂಡ ಮಕ್ಕಳನ್ನು ನೋಡಿ ಯಾವ ತಾಯಿಯೂ ಸುಖಬಡುವದಿಲ್ಲ. "

ಆ ದಿನ ಕಡುಬಿನ ಕಾಳಗವಾಯಿತು.

ಊಟವಾದಮೇಲೆ ಯಾಯಾ ಮತ್ತು ಉಷೆ ಎಂಜಲು ತೆಗೆದು ಗೋಮಯ ಹಚ್ಚಿದರು. ತಾಟು ಮಣೆ ತಂಬಿಗೆ ಥಾಲಿಗಳನ್ನು ತೊಳೆದರು. ತಾಯಿಯ ಊಟಕ್ಕೆ ನೆರವಾದರು.

ಗೋದಾವರಿ ಊಟ ಮುಗಿಸಿದಳು. ಅಂದು ಅವಳಿಗೆ ಹತ್ತಿದಷ್ಟು ಊಟದ ರುಚಿ ಹಿಂದೆ ಎಂದೂ ಹತ್ತಿರಲಿಲ್ಲ.

ಉಷೆ ಉಡುಗಿ ಪಡಸಾಲೆಯಲ್ಲಿ ಹಾಸಿದಳು. ಹಾಸುಗೆಯ ಮೇಲೆ ಯಾಯಾ, ಕಮಲೆ, ಧೀರ, ಬಾಬೂ ಕುಳಿತು ಎಲೆ, ಅಡಿಕೆ ಮೆಲ್ಲಹತ್ತಿದರು. ಗೋದಾವರಿಯು ಅಡಿಗೆಯನ್ನು ಮುಚ್ಚಿಟ್ಟು ಮುಸುರೆಯನ್ನು ಬಚ್ಚಲಕ್ಕೆ ಚಲ್ಲಿ ಉಡುಸಾರಣೆಮಾಡಿ ಕೈಕಾಲು ತೊಳೆದು ಅಡಿಗೆಗೆ ಉಟ್ಟ ಅರಿವೆಯನ್ನು ಕಳೆದು ಸೀರೆಯುಟ್ಟು ಹೊರಗೆ ಬಂದಳು. ತಾಯಿ ಬಂದುದರಿಂದ ಎಲ್ಲರು ಸಮನಾಗಿ ಕುಳಿತರು. ಗೋದಾವರಿಯೂ ಕುಳಿತು ಎಲ್ಲರನ್ನು ತಾಯ್ತನದ ಕರುಣೆಯಿಂದ ನಿರೀಕ್ಷಿಸಿದಳು.

" ಯಾಯಾ ಸರಿಯಾಗಿ ಕೂಡಮ್ಮ. ನೀನು ನನ್ನ ಚಿಕ್ಕಸೊಸೆ " ಮೊದಲನೆಯ ಗುಂಡು ಎಲ್ಲರನ್ನೂ ದಿಕ್ಕು ತಪ್ಪಿಸಿತು

" ಅವ್ವಾ ! " ಬಾಬೂ ಅಂದನು.

" ಅಹುದು ಬಾಬೂ ಇವಳನ್ನು ನೀನು ಲಗ್ನವಾಗು. "

---

—ಬಾಸಿಂಗಬಲ

ಎರಡನೆಯ ಗುಂಡು ಬಾಬೂನನ್ನು ಕೆರಳಿಸಿತು.

"ಇವಳು ನೀಮಾನ ಮಗಳು. ಅವ್ವಾ ಇವಳನ್ನು ಹೇಗೆ ಲಗ್ನವಾಗಲಿ ?" ಬಾಬೂ ಅಂದನು.

"ನೀಮಾ ನಿಜವಾದ ತಾಯಿಯಲ್ಲ." ಯಾಯಾನನ್ನು ಉದ್ದೇಶಿಸಿ ಗೋದಾವರಿ ಅಂದಳು. "ನಿನಗೆ ಗೊತ್ತಿದೆಯೇ ಯಾಯಾ ?"

"ಅಮ್ಮ ಏನೋ ಹೇಳುತ್ತಿದ್ದಳು. ನನಗೆ ಪೂರ್ಣ ನೆಪ್ಪ ಇಲ್ಲ." ಯಾಯಾ ತಿದ್ದಿ ಮಾತನಾಡಿದಳು.

ಅಹುದು. ಆಗ ನೀನು ತೀರ ಚಿಕ್ಕವಳು, ಅದೇ ಹುಟ್ಟಿದವಳು. ನೀಮಾ ದಾಸಪ್ಪನನ್ನು ಇಟ್ಟುಕೊಂಡಿದ್ದಳು ದಾಸಪ್ಪನ ಹೆಂಡತಿ ಲಕ್ಷ್ಮಿ ಲಕ್ಷ್ಮಿ ಮತ್ತು ನೀಮಾ ಒಂದೇದಿನ ಹಡೆದರು. ನೀಮಾನಿಗೆ ಗಂಡು ಮಗವಾಯಿತು. ಲಕ್ಷ್ಮಿಗೆ ಹೆಣ್ಣುಮಗುವಾಯಿತು. ನೀಮಾನಿಗೆ ಗಂಡು ಬೇಕಿರಲಿಲ್ಲ ಅವಳು ದಾಸಪ್ಪನನ್ನು ಕರೆದು ಸಂಗತಿ ತಿಳಿಸಿದಳು. ಅವನು ಮೊದಲು ಒಪ್ಪಲಿಲ್ಲ. ಆದರೆ ತನಗೂ ಆ ಇಳಿವಯಸ್ಸಿನಲ್ಲಿ ಗಂಡೇಬೇಕೆಂದು ವಿಚಾರ ಮಾಡಿದನು.

"ದಾಸಪ್ಪನ ಮಗ ಈಗ ಎಲ್ಲಿದ್ದಾನೆ ?" ಧೀರ ಕೇಳಿದನು.

"ಅದನ್ನೇ ನಾನೀಗ ಹೇಳುವದು." ಗೋದಾವರಿ ಮುಂದುವರೆದಳು. "ಎರಡೂ ಕೂಸುಗಳು ಬೆಳೆಯುಹತ್ತಿದವು. ದಾಸಪ್ಪನು ಮಗನನ್ನು ಬಹಳ ಆಸ್ಥೆಯಿಂದ ಬೆಳಸಹತ್ತಿದನು. ಆದರೆ ಅವನ ದುರ್ದೈವ! ಬಾಲಕನಿರುವಾಗಲೇ ಆ ಹುಡುಗ ವಿಷಮಜ್ವರಕ್ಕೆ ತುತ್ತಾಗಿ ಬಿಟ್ಟನು. ಊರಿಗೇ ಊರೇ ಮರುಗಿತು. ಅವನ ತರುವಾಯ ಲಕ್ಷ್ಮಿಗೆ ಮಕ್ಕಳಾಗಲಿಲ್ಲ. ದಾಸಪ್ಪ ತೀರಿದ ಮೇಲೆ ನೀಮಾ ನಿಜ ಸಂಗತಿ ಲಕ್ಷ್ಮಿಗೆ ತಿಳಿಸಿ ಯಾಯಾನನ್ನು ತಿರುಗಿ ಕೊಡಬೇಕೆಂದು ಮಾಡಿದಳು. ಲಕ್ಷ್ಮಿ ಒಪ್ಪಲಿಲ್ಲ. ಆದರೆ ತಾಯ ಕರುಳೊಂದಿದೆಯಲ್ಲ. ದಾಸಪ್ಪ ಸತ್ತರೂ ಲಕ್ಷ್ಮಿ ನೀಮಾಳಿಗೆ ಪರೋಪರಿಯಿಂದ ಮಾಡಿದಳು. ತಾನು ತೀರುವಾಗ ನೀಮಾಳು ತನ್ನ ಹಾದಿಗೇ ಯಾಯಾನನ್ನು ಹಚ್ಚಬಾರದೆಂದೂ ಅವಳಿಗೆ ಮದುವೆ ಮಾಡಿ

ದರೇ ತನ್ನ ಆತ್ಮಕ್ಕೆ ಶಾಂತತೆಯಾಗುವದೆಂದೂ ಹೇಳಿ, ಹಾಗೆ ಮಾಡಿಯೇ ತೀರಬೇಕೆಂದು ನೀಮಾನ ಕಡೆಯಿಂದ ವಚನ ತಕ್ಕೊಂಡಳು. ಲಕ್ಷ್ಮಿ ತೀರಿದಮೇಲೆ ನೀಮಾ ಲೋಕಾಪುರಕ್ಕೆ ಅಬಚಿಯ ಮನೆಗೆ ಹೋದಳು. ಅಲ್ಲಿಯೇ ಯಾಯಾ ಬೆಳೆದಳು. ಇನ್ನು ನಿಮ್ಮಿಬ್ಬರ ಪ್ರೇಮ ಹೇಗೆ ಕೂಡಿತು ಹೇಳಿರಿ ? ” ಗೋದಾವರಿ ಅಂದಳು.

ಇಬ್ಬರೂ ಲಜ್ಜಿತರಾದರು.

“ ಅಹುದು ಬಾಬೂ. ಯಾಯಾನನ್ನು ಲಗ್ನವಾಗಿಬಿಡು. ನನ್ನ ಆಶೀರ್ವಾದವಿದೆ........ಬಾಮ್ಮಾ ಯಾಯಾ ! ”

ಯಾಯಾ ಎದ್ದು ಅತ್ತೆಗೆ ನಮಸ್ಕರಿಸಿದಳು ಬಾಬೂ ಎದ್ದು ತಾಯಿಗೆ ನಮಸ್ಕರಿಸಿದನು. ಕಣ್ಣಲ್ಲಿ ನೀರು ಹರಿಯುತ್ತಿತ್ತು.

“ ನೀನು ದೇವತೆ ” ಎನ್ನುತ್ತ ಬಾಬೂ ತಾಯಿಯ ಕಾಲು ಹಿಡಿದನು.

ಗೋದಾವರಿ ಅವರಿಬ್ಬರಿಗೂ ಆಶೀರ್ವಧಿಸಿದಳು.

“ ಅವ್ವಾ ಈದಿನ ಸಂಪತ್ತು ಶುಕ್ರವಾರ.” ಕಮಲೆ ನುಡಿದಳು. ಎಲ್ಲರ ಬಗೆಗಳೂ ಉಕ್ಕಿ ಬಂದವು. ಸಂತಸದ ಬುಗ್ಗೆ ಚಿಮ್ಮಿ ನಗೆಯ ಹೊನಲು ಹರಿಯಿತು.

---

—ಬಾಸಿಂಗಬಲ

## ದುಃಖದ ಸ್ಮಾರಕ.

ಸಾಮಾನ್ಯರು ತಮ್ಮ ದುಃಖ ಸಂತಾಪಗಳನ್ನು ಕಣ್ಣೀರಿನಿಂದ ತೊಳೆದಾಗಲಿ,
ಕೊಲೆಯಿಂದ ತೀರಿಸಿಯಾಗಲಿ, ಆತ್ಮಹತ್ಯದಿಂದ ಶೂನ್ಯವಾದಾಗಲಿ
ನೆಮ್ಮದಿಯನ್ನು ಕಂಡುಕೊಳ್ಳುವರು. ಆದರೆ ಇನ್ನೂ ಮೇಲ್ತರ
ಗತಿಯ ಜೀವರ ದುಃಖಸಂತಾಪ ಸುಂದರವಾಗಿ, ರುಚಿ
ಪೂರ್ಣವಾಗಿ, ಕಲಾತ್ಮಕವಾಗಿ, ಚಿರಸ್ಥಾಯಿ
ಯಾಗುವದು. ಅವರ ಮಾನಸಿಕ ಅಶಾಂತಿ
ಕ್ರಿಯಾತ್ಮಕವಾಗಿ ಲೋಕ ವಿಲಕ್ಷಣ
ವಾದ ಸೌಂದರ್ಯಸಾಧನಗಳನ್ನು
ಪ್ರಕಾಶಗೊಳಿಸುವದು.

ಅಂಥವುಗಳಲ್ಲಿ

ಸಮ್ರಾಟ ಚಂದ್ರಗುಪ್ತನ
ಕೀಳ್‌ಜಾತಿಯ ಭಾವನೆಯ ಅಶಾಂತಿ
ಮೌರ್ಯ ಸಾಮ್ರಾಜ್ಯ ಸ್ಥಾಪಿಸಿತು. ಪ್ರಿಯ
ದರ್ಶಿ ಅಶೋಕನ " ಕೊಲೆಯಹೇಸಿಕೆ " ಬೌದ್ಧ
ಧರ್ಮದ ಹಬ್ಬುಗೆಗೆ ಕಾರಣವಾಯಿತು. ಶಹಾಜಹಾನನ
ವಿರಹಸಂತಾಪ ತಾಜಮಹಾಲ ನಿರ್ಮಿತಿಗೆ ಮೂಲವಾಯಿತು.
ಕವಿ ರವೀಂದ್ರರ ಆಧ್ಯಾತ್ಮಿಕ ತಳಮಳ ಗೀತಾಂಜಲಿ ಎಂಬ ಅಮರ
ಕೃತಿಗೆ ಮೂಲವಾಯಿತು. ಉಮರ ಖಯ್ಯಾಮನ ಪ್ರಿಯಳ ದರ್ಶನಾ
ಕಾಂಕ್ಷೆಯ ಹೊಯದಾಟ ಒಸಗೆಯ ನಿರ್ಮಿತಿಗೆ ಬೀಜವಾಯಿತು.

ಇದರಂತೆ

ಶ್ರೀಕೃಷ್ಣ ಪಾಟೀಲರು ತಮ್ಮ ಪ್ರೀತಿಯ ಮಗು
**ಚಿ|| ರಮೇಶನ**
ಅಕಾಲ ಮರಣದ ದುಃಖಸಂತಾಪದ ಪ್ರತೀಕದ ಸ್ಮಾರಕ

# ಜಯಂತ

ಕಾದಂಬರಿಯನ್ನು ಕನ್ನಡಿಗರಿಗೆ ಒದಗಿಸುವರು.

**ಸುವರ್ಣ ಭಾರತಿ ಗ್ರಂಥಮಾಲೆ, ಬೆಳಗಾಂವಿ.**